# ಅಪರಂಜಿ

ಜನವರಿ 2002

ಹಾಸ್ಯೋತ್ಸವ ವಿಶೇಷಾಂಕ



ಪ್ರತಿ: ರೂ. 20.00


VCCS



ಗೌರವ ಸಲಹೆಗಾರರು:
ಶ್ರೀ ಅ. ರಾ. ಸೇ.
ಶ್ರೀ ಶೇಷಗಿರಿ
ಸಂಪಾದಕ:
ಶಿವಕುಮಾರ್
ನಿರ್ವಹಣೆ:
ಬೇಲೂರು ರಾಮಮೂರ್ತಿ
ಕೃಷ್ಣ ಸುಬ್ಬರಾವ್

ಚಂದಾ ವಿವರ:
ಬಿಡಿ ಪ್ರತಿ: ರೂ. 20.00
ವಾರ್ಷಿಕ ಚಂದಾ: ರೂ. 60
ಹತ್ತು ವರ್ಷದ ಚಂದಾ : ರೂ. 500
Ph: 3345259
email: aparanji@hotmail.com
website: aparanjimag.com

ವಿಳಾಸ: ಕೊರವಂಜಿ ಅಪರಂಜಿ ಟ್ರಸ್ಟ್, 36, 6ನೇ ಮುಖ್ಯರಸ್ತೆ, ಮಲ್ಲೇಶ್ವರಂ, ಬೆಂಗಳೂರು- 560 003 (ಕೆಲಸದ ವೇಳೆ: ಬೆಳಿಗ್ಗೆ 8 ರಿಂದ 10 ಗಂಟೆಯವರೆಗೆ)

## ಈ ಸಂಚಿಕೆಯಲ್ಲಿ

ಸಂಪುಟ 19 ಜನವರಿ- 2002 ಸಂಚಿಕೆ - 4



ಮುದ್ರಣ: ಇಂಪ್ರೆಶನ್ಸ್, ಬೆಂಗಳೂರು - 3 ಅಕ್ಷರ ಜೋಡಣೆ: ಒಮೇಗಾ ಲೇಸರ್ ಟೆಕ್, ಬೆಂಗಳೂರು 27

# ಮೊದಲ ಮಾತು

ಈ ಸಂಚಿಕೆ ನಿಮ್ಮ ಕೈಸೇರುವ ಹೊತ್ತಿಗೆ ನಗುವಿನ ಸೀಜನ್ ಪ್ರಾರಂಭವಾಗಿರುತ್ತದೆ. ಕಳೆದ ಹಲವು ವರ್ಷಗಳಿಂದ ನಮ್ಮ ಟ್ರಸ್ಟ್ ಹಾಸ್ಯಬ್ರಹ್ಮದ ಸಹಯೋಗದೊಡನೆ ನಡೆಸಿಕೊಂಡು ಬರುತ್ತಿರುವ ಹಾಸ್ಯೋತ್ಸವದ ಸಡಗರದ ತಿಂಗಳು ಡಿಸೆಂಬರ್. ಇಪ್ಪತ್ತೈದರಂದು ನಡೆಯಲಿರುವ ಗೊರೂರರ ಸಂಸ್ಮರಣೆಯಂದು ನಮ್ಮ ಪ್ರಕಟಣೆ ''ಬೆಸ್ಟ್ ಆಫ್ ಕೊರವಂಜಿ'' (ಎರಡನೆಯ ಕಂತು) ಮಾರಾಟಕ್ಕೆ ಬಿಡುಗಡೆಯಾಗಲಿದೆ. ಜೊತೆಗೆ, ಹಿಂದೆ ನಡೆದ ''ರಾಶಿ ರತ್ನ ಸಂಸ್ಮರಣೆ'' ಹಾಗೂ ''ಬೀಚಿ ಸಂಸ್ಮರಣೆ'' ಸಮಾರಂಭಗಳಿಂದ ಆಯ್ದ ರಸನಿಮಿಷಗಳನ್ನು ಎರಡು ವಿಸಿಡಿಗಳಲ್ಲಿ ಭಟ್ಟಿ ಇಳಿಸಿ, ಈ ಬಾರಿಯ ಹಾಸ್ಯೋತ್ಸವದಲ್ಲಿ ನಿಮಗೆ ದೊರಕುವಂತೆ ಮಾಡಿದ್ದೇವೆ. ಮಾಗಿಯ ಛಳಿಯಲ್ಲಿ ಹಿತವಾದ ಬಿಸಿಲಿಗೆ ಮೈಯೊಡ್ಡಿ, ಹಾಸ್ಯ ಸಾಹಿತ್ಯದ ಮೃಷ್ಟಾನ್ನ ಭೋಜನದ ರುಚಿಯನ್ನು ಸವಿಯಲು ಹಾಸ್ಯೋತ್ಸವ ಒಂದು ಅಪೂರ್ವ ಅವಕಾಶ.

ಈ ಬಾರಿಯ ಹಾಸ್ಯೋತ್ಸವದ ವಿಶೇಷ ಸಂಚಿಕೆಯನ್ನು ಚಿತ್ರಭರಿತವಾಗಿ ಮಾಡಲು ಪ್ರಾಮಾಣಿಕ ಯತ್ನ ನಡೆಸಿದ್ದೇವೆ. ಖ್ಯಾತ ನಗೆಸಾಹಿತಿ ಜೇಮ್ಸ್ ಥರ್ಬರ್‌ನ ಕಥೆಯೊಂದನ್ನು ಆಧರಿಸಿ ರಚಿಸಿರುವ ''ರಾಜಕುಮಾರಿ ಮತ್ತು ತಗಡಿನ ಡಬ್ಬಿ'' ನಿಮಗೆ ಖುಷಿ ಕೊಡಲೆಂದು ನಮ್ಮ ಆಶಯ. ಅಂತೆಯೇ ಸೆಪ್ಟೆಂಬರ್ ಹನ್ನೊಂದರಂದು ನ್ಯೂಯಾರ್ಕ್ ನಲ್ಲಿ ನಡೆದ ದುರಂತದ ಹೊಸದರಲ್ಲಿ ಜಗತ್ತಿನಾದ್ಯಂತ ಅನೇಕ ವ್ಯಂಗ್ಯಚಿತ್ರಕಾರರು ತಮ್ಮ ಪ್ರತಿಕ್ರಿಯೆಗಳನ್ನು ರೇಖೆಗಳ ಮೂಲಕ ವ್ಯಕ್ತಪಡಿಸಿದರು. ಇವುಗಳಲ್ಲಿ ಹಲವನ್ನು ಇಂಟರ್ನೆಟ್ ಮೂಲಕ ಸಂಗ್ರಹಿಸಿ ಈ ಸಂಚಿಕೆಯಲ್ಲಿ ನೀಡಿದ್ದೇವೆ. ವಿವಿಧ ರಾಷ್ಟ್ರಗಳ ದೃಷ್ಟಿಕೋನಗಳಿಗೆ ಈ ಚಿತ್ರಗಳು ಒಂದು ಕಿಟಕಿಯಾಗಬಲ್ಲವು. ಇದಲ್ಲದೇ ಬಹುಪಾಲು ಲೇಖನಗಳಿಗೆ ಬಾಗೂರು ಮಾರ್ಕಂಡೇಯ ಚಿತ್ರಗಳನ್ನು ರಚಿಸಿ ಅವುಗಳ ಆಕರ್ಷಣೆಯನ್ನು ಹೆಚ್ಚಿಸಿದ್ದಾರೆ. ಚಿತ್ರ ರಚಿಸಲು ಇವರಿಗೆ ಬಿಡುವು ಕೊಟ್ಟ ಇವರ ಪತ್ನಿ ಲತಾ ಅವರಿಗೆ ಅಪರಂಜಿಯ ಕೃತಜ್ಞತೆಗಳು.☺

ಈ ಬಾರಿ ನಮ್ಮ ಹಾಸ್ಯೋತ್ಸವ ವಿಶೇಷಾಂಕಕ್ಕೆ ಲೇಖನಗಳನ್ನು ಆಹ್ವಾನಿಸಿದಾಗ ನಮ್ಮ ನಿರೀಕ್ಷೆಗೆ ಮೀರಿ ಲೇಖನಗಳು ಬರುವುದೆಂದು ಖಂಡಿತ ಊಹಿಸಿರಲಿಲ್ಲ.

ಹಾಗಾಗಿ ಹಲವು ಲೇಖನಗಳನ್ನು ಈ ಸಂಚಿಕೆಯಲ್ಲಿ ಅಳವಡಿಸಲು ಸಾಧ್ಯವಾಗಿಲ್ಲ. ಇಂತಹ ಸ್ಪಿಲೋವರ್ ಬರಹಗಳನ್ನು ಮುಂದಿನ ಸಂಚಿಕೆಗಳಲ್ಲಿ ಬೆಳಕಿಗೆ ತರುತ್ತೇವೆಂದು ಲೇಖಕರಿಗೆ ಆಶ್ವಾಸನೆ ನೀಡುತ್ತೇವೆ. ಸಂಬಂಧಿಸಿದ ಬರಹಗಾರರು ನಮ್ಮ ಇಕ್ಕಟ್ಟಿನ ಸ್ಥಿತಿಯನ್ನು ಅರ್ಥಮಾಡಿಕೊಳ್ಳುತ್ತಾರೆಂದು ನಮ್ಮ ಆಶಯ. ಲೇಖನಗಳ ಕರಡನ್ನು ಓದುವಾಗ ಜೋರಾಗಿ ನಗು ಬಂದರೆ ಮಾತ್ರಾ ಅವುಗಳನ್ನು ಆರಿಸಬೇಕೆಂದು ನಮಗೆ ನಾವೇ ಒಂದು ನಿಯಮವನ್ನು ನಿಗದಿಸಿಕೊಂಡಿದ್ದೆವು. ಖ್ಯಾತ ಕತೆಗಾರ ಮಾಸ್ತಿಯವರ ಬರಹದ ಶೈಲಿಯನ್ನು ಅನುಕರಿಸಿ ಶೀನು ತಮ್ಮ ಲೇಖನ ಬರೆದಿದ್ದಾರೆ. ಅನುಕರಣೆ, ಮೆಚ್ಚುಗೆಯ ಸೂಚಿ ಎಂಬುದು ನಮ್ಮ ಅನಿಸಿಕೆ. ಗೌತಮರ ಮಂಡಿ ಬೇನೆಯನ್ನಾಗಲೀ, ಸತ್ಯರ ಪ್ರೇಮಕಥೆಯನ್ನಾಗಲಿ ಅಥವಾ ಇನ್ನಾವುದೇ ಬರಹವನ್ನಾಗಲೀ, ಬಹು ಜಾಗರೂಕತೆಯಿಂದ ಆಯ್ದು ನಿಮ್ಮ reading pleasure ಗಾಗಿ ಅನುಗೊಳಿಸಲಾಗಿದೆ. ನಮ್ಮ ಯತ್ನ ಎಷ್ಟರಮಟ್ಟಿಗೆ ಯಶಸ್ವಿಯಾಗಿದೆ ಎಂಬುದನ್ನು ನೀವು ಬರೆದು ತಿಳಿಸಿದರೆ ನಿಮಗೆ ಅಪರಂಜಿ ಕೃತಜ್ಞಳು.

ಈ ಎಲ್ಲ ಕೆಲಸಗಳ ಗುರುತರ ಜವಾಬ್ದಾರಿಯನ್ನು ಸಂತೋಷದಿಂದ ಭರಿಸಿ, ದಕ್ಷತೆಯಿಂದ ನಿರ್ವಹಿಸಿದ ಗೆಳೆಯರಾದ ಬೇಲೂರು ರಾಮಮೂರ್ತಿಯವರಿಗೆ ಅಪರಂಜಿ ಆಭಾರಿ. ಶ್ರೀ ಎ.ಆರ್. ರಾಜಗೋಪಾಲ್ ಅವರು ಬಿಡುವಿಲ್ಲದೇ ಓಡಾಡಿ, ಸಂಚಿಕೆಗೆ ಜಾಹಿರಾತುಗಳನ್ನು ಒದಗಿಸಿದ್ದಾರೆ. ಈ ಮಿತ್ರರಿಗೆ ಅಪರಂಜಿಯ ಕೃತಜ್ಞತೆಗಳು.

ಚೊಕ್ಕವಾಗಿ ಡಿ.ಟಿ.ಪಿ. ಕೆಲಸವನ್ನು ನಿರ್ವಹಿಸಿದ ಒಮೇಗ ಲೇಸರ್‌ಟೆಕ್‌ನ ವಸಂತ, ರವಿ, ಮುದ್ರಣ ಕಾರ್ಯವನ್ನು ಶ್ರದ್ಧೆಯಿಂದ ಮಾಡಿಕೊಟ್ಟ ರವಿಗ್ರಾಫಿಕ್ಸ್‌ನ ವಿ.ಆರ್. ನಾಥ್ ಇವರೆಲ್ಲರಿಗೆ ನಮ್ಮ ನಮನ. ಎಲ್ಲಕ್ಕೂ ಮುಖ್ಯವಾಗಿ ಪತ್ರಿಕೆಯನ್ನು ಕೊಂಡು ಓದುತ್ತಿರುವ ನಿಮಗೆ, ಓದುವ ಎಲ್ಲ ಕನ್ನಡಿಗರಿಗೆ, ನಿಮ್ಮ ಪ್ರೋತ್ಸಾಹಕ್ಕಾಗಿ ನಾವು ಋಣಿಗಳು.

ಅಂದಹಾಗೇ ನಿಮಗೆ ನಮ್ಮೆಲ್ಲರ ಹೊಸ ವರ್ಷ ಶುಭಾಶಯಗಳು.

ನಗೆಗನ್ನಡಂ ಗೆಲ್ಗೆ

**– ಶಿವಕುಮಾರ್**




● ಪ್ರಕಾಶ್

ಕ್ರಿಕೆಟ್ ಮ್ಯಾಚ್‌ಗಿಂತ ಐ.ಸಿ.ಸಿ. - ಬಿ.ಸಿ.ಸಿ.ಐ. ಪಂದ್ಯ ಬಹು ಚೆನ್ನಾಗಿತ್ತು!!

★★★

ಸಿಗರೇಟ್ ಮೇಲಿನ ಅಬ್ಕಾರಿ ಸುಂಕ ರದ್ದಿಗೆ ಆಗ್ರಹ
- ಸುದ್ದಿ

**ಕ್ಯಾನ್ಸರ್ ಜೀವಕೋಶಗಳು ಸಂತಸಪಟ್ಟವಂತೆ!!**

★★★

'ರಜೆ ದಿನಗಳನ್ನೆಲ್ಲ ಕಳೆದು ನನಗೆ ಉಳಿಯುವ 275 ದಿನಗಳಲ್ಲಿ ಸೇವೆ ಸಲ್ಲಿಸುವೆ'
- ನೂತನ ಮೇಯರ್

**ವಾಸ್ತವಿಕ ದೃಷ್ಟಿಕೋನ ಅಂದರೆ ಇದೇ!!**

★★★

ಸಮ್ಮಿಶ್ರ ಸರ್ಕಾರದ ಇನ್ನೊಂದು ಹೆಸರು ಅಭದ್ರತೆ
- ಶ್ರೀ ಬಂಗಾರಪ್ಪ

**ಚಿನ್ನದಂತಹ ಮಾತು!**

★★★

ಆಡಳಿತದಲ್ಲಿ ಪಾರದರ್ಶಕತೆ ಜಾರಿ ಶೀಘ್ರ
- ಮಂತ್ರಿಗಳು

**ಟೇಬಲ್‌ಗಳನ್ನೆಲ್ಲ ಗಾಜಿನಿಂದ ಮಾಡಿದರೆ ಸಾಕು!!**

★★★

ಬಿಹಾರಿನ ಮೇವು ಹಗರಣದ ಬಗ್ಗೆ ಪುಸ್ತಕ
- ಸುದ್ದಿ

**ಆ ಪುಸ್ತಕದ ಮಾರಾಟದಲ್ಲೂ Scam ಆಗುತ್ತದೋ?**

★★★

ಟೆಲಿಕಾಂ ಇಲಾಖೆಗೆ ವಂಚನೆ; ಮೂರು ಜನರ ಬಂಧನ

- ಸುದ್ದಿ

**ದೂರವಾಣಿ ದೂರುವಾಣಿಯಾಯಿತು!!**

★★★

ಕನ್ನಡಿಯಲ್ಲಿ ಕಂಪಾತನನ್ನು ನೋಡಲು ಹಿಂಜರಿಯದ ನೃಪಾಲರಿಗೆ ಅಪರಂಜಿಯ ಅಭಿನಂದನೆಗಳು!!

★★★

ಬಾಸ್ ಮಾತುಕತೆಗೆ ಆಫ್ಘನ್ ಬಣಗಳ ಸಮ್ಮತಿ

- ಪತ್ರಿಕೆ

**ತಾಲಿ-ಬಾನ್‌ಗೆ ಗೊತ್ತಾಗುಲ್ಲ ತಾನೆ?**

★★★

'ಪೋಟೋ ವಿರುದ್ಧ ವಿರೋಧಿಸುವವರೂ ಟೆರರಿಸ್ಟ್‌ಗಳೇ?' ಅಂತ ಅಪರಂಜಿ ಚಿಂತಿಸಿದಳಂತೆ!!

★★★



ನಮ್ಮ ಕಾನ್ಸೆಪ್ಟು, ಪ್ರೆಸೆಂಟೇಷನ್ ಎಲ್ಲಾ ಚೆನ್ನಾಗಿತ್ರಿ.
ಕಸ್ಟಮರ್ ಸಹಿ ಹಾಕೋದಕ್ಕೆ ರೆಡಿ ಆದಾಗ
ನಮ್ಮ ಆಫೀಸಿನಲ್ಲಿ ಒಂದು ಪೆನ್ನೂ ಇರ್ಲಿಲ್ಲ, ಛೇ!.

# ನಗುವೊಂದು ರಸಪಾಕ, ಅಳುವೊಂದು ರಸಪಾಕ

– ಬಿ. ನಾಗೇಂದ್ರ

ಸುಖ, ನೆಮ್ಮದಿ ಇವುಗಳ ಅನುಭವದಿಂದ ನನ್ನ ಮೊಗದ ಮೇಲೆ ಮೂಡುವುದು ನಗುವಿನ ಛಾಯೆ, ದುಃಖ, ಕಷ್ಟ ಇವುಗಳ ಅನುಭವದಿಂದ, ನನಗೆ ಅಳುಮೋರೆ. ನನಗೆ ನಗು ಬೇಕು; ಅಳುಬೇಡ. ಅದು ಜೀವನದಲ್ಲಿ ಸಾಧ್ಯವಿಲ್ಲದ ಮಾತು. ಕಷ್ಟವನ್ನು ಅನುಭವಿಸಲೇಬೇಕು. ಅದನ್ನು ಬೇಡ ಎನ್ನಲಾರೆ. ಹಾಗಾದರೆ, ಜೀವನದಲ್ಲಿ ನಗು ಮತ್ತು ಅಳು ಇವುಗಳ ಅರ್ಥವೇನು? ಶ್ರೀ ಡಿ.ವಿ.ಜಿ.ಯವರನ್ನು ಕೇಳಿ:

ನಗುವೊಂದು ರಸಪಾಕವಳುವೊಂದು ರಸಪಾಕ।
ನಗುವಾತ್ಮ ಪರಿಮಳವ ಪಸರಿಸುವ ಕುಸುಮ॥
ದುಗುಡವಾತ್ಮವ ಕಡೆದು ಸತ್ವವೆತ್ತುವ ಮಂತು।
ಬಗೆದೆರಡನುಂ, ಭುಜಿಸು - ಮಂಕುತಿಮ್ಮ॥
- ಮಂಕುತಿಮ್ಮನ ಕಗ್ಗ (434)

ನಗುವಿನ ಪೂರ್ವರೂಪ ಸುಖ. ಅಳುವಿನ ಪೂರ್ವರೂಪ ದುಃಖ. ಸುಖ ದುಃಖಗಳೆರಡೂ ರಸವತ್ತಾದ ಭಕ್ಷ್ಯಗಳಂತೆ. ಈ ಭೋಜನದಲ್ಲಿ ಒಂದು ಸ್ವಾರಸ್ಯವಿದೆ. ಸ್ವಾರಸ್ಯದ ಗುಟ್ಟನ್ನು ತಿಳಿದು, ಅವುಗಳನ್ನು ಭುಜಿಸಬೇಕೆಂತೆ. ಆ ಗುಟ್ಟು ಹೀಗಿದೆ:

ನಗು ಸುವಾಸನೆಯನ್ನು ಹರಡುವ ಹೂವಾದರೆ, ಅಳು ಬೆಣ್ಣೆಯನ್ನು ಕಡೆಯುವ ಕಡೆಗೋಲು. ಹೂವು ತನ್ನಲ್ಲಿರುವ ಸುವಾಸನೆಯನ್ನು ಹರಡಿ ಎಲ್ಲರಿಗೂ ಸಂತೋಷವನ್ನು ಉಂಟುಮಾಡುತ್ತದೆ. ನಗುವಿಗೆ ಮನಸ್ಸಿನ ಆನಂದವನ್ನು ಸುತ್ತಮುತ್ತಲಿನವರಿಗೆ ಹಂಚುವ ಸಾಮರ್ಥ್ಯವಿದೆ.

ಕಡೆಗೋಲು ಮೊಸರನ್ನು ಕಡೆದು ಅದರಲ್ಲಿ ಅಡಗಿದ್ದ ಬೆಣ್ಣೆಯನ್ನು ಮೇಲೆತ್ತುತ್ತದೆ. ಕಷ್ಟ ಕಾರ್ಪಣ್ಯಗಳೋ ಮನಸ್ಸನ್ನು ಮಥಿಸಿ ಅದರಲ್ಲಿ ಅಡಗಿದ್ದ ಸತ್ವದ ದಾರ್ಢ್ಯವನ್ನು ಮೇಲೆತ್ತುತ್ತದೆ.

ಅಳು ನಗುಗಳೆರಡೂ ಅಂತಃಕರಣದ ಸಂಸ್ಕಾರಕ್ಕೆ ಬೇಕಾದ ಸಾಧನಗಳು. ಎರಡರ ಅನುಭವಗಳೂ ಆತ್ಮಯಾತ್ರೆಯಲ್ಲಿ ಪೂರಕವಾಗಿವೆ.

# ಒಂದು ಲೌವ್ ಸ್ಟೋರೀ ....

– ಸೀ. ಆರ್. ಸತ್ಯ

ಸೆಪ್ಟೆಂಬರ್ ಹನ್ನೊಂದು, ಒಸಾಮಾ, ಬುಶ್, ಕಾಬೂಲ್ ಅಂತೆಲ್ಲಾ ಇತ್ತೀಚೆಗೆ ತಲೆಕೆಡಿಸಿಕೊಂಡಿರುವ ಓದುಗರಿಗೆಲ್ಲಾ, ಫಾರ್-ಎ-ಚೇಂಜ್ ಅಂತಾರಲ್ಲಾ, ಹಾಗೇ ಒಂದು ಲೌವ್ ಸ್ಟೋರೀ ಒಪ್ಪಿಸ್ತೀನಿ. ಇದರಿಂದಾಗಿ ನಿಮ್ಮ ಮುಖದ ಮೇಲೆ ಒಂದು ಕಿರುನಗೆ ಮೂಡಿದರೆ ಅಷ್ಟೇ ಸಾಕು. ಲೌವ್ ಸ್ಟೋರೀಗೂ ನನ್ನಂತ ಪ್ಯಾದೇಗೂ ಏನು ಸಂಬಂಧ ಅಂತ ಸಹಜವಾದ ಪ್ರಶ್ನೆಯನ್ನು ದಯವಿಟ್ಟು ಕೇಳಬೇಡಿ, ಇದು ನನ್ನ ಸ್ವಂತ ಅನುಭವದಿಂದ ಹೇಳ್ತಾ ಇದೀನಿ - I mean, love ಮಾಡಿದ್ದು ನಾನಲ್ಲ - ಆದರೆ ಈ ಕತೆಯೆಲ್ಲಾ ನಡೆದಿದ್ದು ನಮ್ಮ ಬೀದಿಯಲ್ಲೇ!

ಹೌಸ್ ನಂಬರ್ 32ರ ವಾಸಿ, ಅಹೋಬ್ಲ ರಾವ್. ಅಹೋಬ್ಲ ರಾವ್ ರಿಟೈರ್ಡ್ ವಿಧಾನಸೌಧದ ಎಂತದೋ ಆಫೀಸರ್. ಸ್ವಲ್ಪ ಬೊಜ್ಜು ಹೊಟ್ಟೆ, ಸಕ್ಕರೆ ರೋಗ ಕಂಡರೆ ಬಹಳ ಭಯಭಕ್ತಿ ಇರೋ ಮನುಷ್ಯ. ಆವಾಗಾವಾಗ ಅಲರ್ಜಿ, ಅಲರ್ಜಿ ಅಂತ ಕೂಗಾಡ್ತಾ ಇರ್ತಾರೆ. ಯಾವುದರಿಂದ ಅಲರ್ಜಿ ಅಂತ ಯಾವ ಡಾಕ್ಟರಿಗೇ ಆಗಲೀ, ವಿಜ್ಞಾನಿಗಳಿಗೇ ಆಗಲಿ ಇದುವರೆವಿಗೆ ತಿಳುವಳಿಕೆ ಬಂದಿಲ್ಲ.

ಇವರಿಗೆ ರೂಪಶ್ರೀ ಅಂತ ಇಪ್ಪತ್ತೊಂದು ವಯಸ್ಸಿನ ಮಗಳು. ಹೆಸರಿಗೆ ತಕ್ಕ ಹಾಗೇ ರೂಪಸೀನೇ. ಕಂಪ್ಯೂಟರ್ ಕಂಡರೆ ಸ್ವಲ್ಪ ಹುಚ್ಚು. ಕಂಪ್ಯೂಟರ್ ಕ್ಲಾಸ್ ನಮ್ಮ ರೋಡಿನಲ್ಲೇ ನಡೆಸೋದು, ಅಲ್ಲಿಗೆ ಕಲಿಯೋಕ್ಕೇ ಅಂತ ದಿನಕ್ಕೆ ಎರಡು ಟ್ರಿಪ್ ಮಾಡ್ತಾಳೆ. ಕಂಪ್ಯೂಟರ್ ಕ್ಲಾಸ್ ನಡೆಯೋದು ಹೌಸ್ ನಂ. 48ರಲ್ಲಿ.

ಹರೋಹರ - ಸಾರ್ರೀ - ಡಾಕ್ಟರ್ ಹರೋಹರ - ನಮ್ಮ ರೋಡಿನಲ್ಲೇ ಜಾಂಡಾ ಹೂಡಿರೋ ಹೋಮಿಯೋಪತಿ ಡಾಕ್ಟರ್. ಯಂಗ್ ಬ್ಯಾಚಲರ್. ನೋಡೋದಕ್ಕೂ ಲಕ್ಷಣವಾಗಿದ್ದಾನೆ. ಇವನ ದವಾಖಾನೆ ಹೌಸ್ ನಂ. 47ರ ಶೆಡ್‌ನಲ್ಲಿ. ಇಷ್ಟು ದಿವಸ ಓನರ್ ಮನೆಯ ಹಳೇ ಫಿಯಟ್ ಕಾರ್ ಈ ಶೆಡ್‌ನ ಅಲಂಕರಿಸಿತ್ತು. ಅದನ್ನ ಹರಾಜು ಮಾಡಿದ ಮೇಲೆ ಡಾ. ಹರೋಹರ ಬಾಡಿಗೆಗೆ ತೊಗೊಂಡಿದ್ದು. ಪೇಷೆಂಟುಗಳು ಇನ್ನೂ ಯಾರೂ ಬರ್ತಾ ಇಲ್ಲದ್ದರಿಂದ, ಹರೋಹರ ರೋಡ್ ಕಡೇನೇ ತನ್ನ ಕನ್‌ಸಲ್ಟೇಶನ್ ಕುರ್ಚಿ ಎಳೆದುಕೊಂಡು ರೋಡ್‌ನಲ್ಲಿ ಹೋಗೋರು ಬರೋವರನ್ನ ನೋಡ್ತಾ ಕೂತಿರೋ ಅಭ್ಯಾಸ. ಒಮ್ಮೊಮ್ಮೆ ಗೋಡೆ ಬಾಗಿಲನ್ನ ಮನುಷ್ಯರೇನೋ ಅನ್ನೋ ಹಾಗೆ ಮಾತಾಡಿಸಿ,

ಅಪ್ಪುಗಳ ಆರೋಗ್ಯ ವಿಚಾರಿಸುತ್ತಾ, ತನ್ನ ಹೋಮಿಯೋಪತಿ ಜ್ಞಾನವನ್ನ ಪರಿತಗೊಳಿಸ್ಕೊಳ್ಳೋದು ಪರೋಪರರ ಅಭ್ಯಾಸ. ಹುಟ್ಟಿದಾರಭ್ಯ ಪರೋಪರರಿಗೆ ನಾಯಿಗಳನ್ನ ಕಂಡರೆ ಆಗೋಲ್ಲ.



ನಮ್ಮ ಓದುಗರಲ್ಲಿ ಕೆಲವು ಟ್ಯೂಬ್‌ಲೈಟ್‌ಗಳಿಗೆ ನಾನು ವಿವರಿಸೋ setting ನ ವಿಶೇಷ ಅರ್ಥವಾಗದೇ ಇರಬಹುದು. ಆದರೆ ಕೆಲವು 'ಸ್ಮಾರ್ಟಿ'ಗಳಿಗೆ ಖಂಡಿತಾ ಹೊಳೆದಿರುತ್ತೆ; ಇದು ಲೌವ್ ಹೊಡೆಯೋಕೆ ಪರ್ಫೆಕ್ಟ್ ಸೆಟ್ಟಿಂಗ್ ಅಂತ! ಹೌಸ್ ನಂಬರ್ 32 ರಿಂದ 48ಕ್ಕೆ ಹೋಗಬೇಕಾದರೆ 47ನ್ನ ಹಾದು ಹೋಗಲೇ ಬೇಕಲ್ಲವೆ? ಸರಿ, to cut the story short, ರೂಪಶ್ರೀಗೂ, ಪರೋಪರರಿಗೂ ನೋಡ್ತಾ ನೋಡ್ತಿದ್ದಾಗೆ ಲೌವ್ ಹೊಡೆಯೋದು ಮಾತ್ರ ಅಲ್ಲ, ಅದು ವೃದ್ಧಿಗೊಂಡು ಮರವಾಗೆ ಬೆಳೀತು. ಆಯ್ತುರೀ, ಏನು ಪ್ರಾಬ್ಲಮ್ಮು ಅಂತ ನೀವು ಕೇಳಬಹುದು (ಟ್ಯೂಬ್‌ಲೈಟುಗಳಾಗಿದ್ದರೆ). ಆದರೆ ಸ್ಮಾರ್ಟಿಗಳಿಗೆ ಆಗಲೇ ಗೊತ್ತಾಯ್ತು ಬಿಡಿ. ಎಲ್ಲಾ ಲೌವ್ ಸ್ಟೋರಿನಲ್ಲೂ villain ಇರಬೇಕಲ್ಲವೆ? Enter ಅಹೋಬ್ಲ ರಾವ್!

ಪುರಾತನ ಕಾಲದಲ್ಲಿ ಕಾಂಪಿಟೇಟಿವ್ ಸ್ವಯಂವರಗಳಿದ್ದ ಹಾಗೆ ಅಹೋಬ್ಲರಾಯರು ರೂಪಶ್ರೀ ಮದುವೆಗೆ ಕೆಲವು ಪ್ರೀ-ಕಂಡಿಶನ್ಸ್‌ಗಳನ್ನು ಹಾಕಿದ್ರು:

ಒಂದು : ಆಗೋ ಅಳಿಯ ಡಾಕ್ಟ್ರಾಗಿರಬೇಕು. ಯಾಕೇಂದ್ರೆ ತಮಗೆ ಸಕ್ಕರೆ ರೋಗ ಹಾಗೂ ಅಲರ್ಜಿ ಮುಂದಕ್ಕೆ ಖಂಡಿತವಾಗಿ ವಕ್ಕರಿಸಿಕೊಂಡರೆ, ಮನೇನಲ್ಲೆ ಒಬ್ಬ ಡಾಕ್ಟ್ರು ಇದ್ದರೆ ಖರ್ಚು ಕಮ್ಮಿ.

ಎರಡು : ಆ ಡಾಕ್ಟರು ಇಂಗ್ಲೀಷ್ ಡಾಕ್ಟರಾದ್ರೂ ಸರಿ, ಯುನಾನಿ ಆದ್ರೂ ಸರಿ, ಆಯುರ್ವೇದ ಆದ್ರೂ ಸರಿ, ಹೋಮಿಯೋಪತಿ ಮಾತ್ರ ಆಗಿರಬಾರದು. (ಚಿಕ್ಕ ವಯಸ್ಸಿನಲ್ಲಿ ಚೇಳು ಕಡಿತಕ್ಕೆ ಹೋಮಿಯೋಪತಿ ತೊಗೊಂಡು ಚೇಳು ಸತ್ತರೂ; ಅವರ ನೋವು ಕಮ್ಮಿಯೇ ಆಗಲಿಲ್ಲವಂತೆ. ಅದಕ್ಕೇ ಕೋಪ)

ಮೂರು : ಆಗೋ ಅಳಿಯ, ಪ್ರಾಣಿಗಳನ್ನು ಪ್ರೀತಿಸಬೇಕು (ಯಾಕೇಂದ್ರೆ ಅಹೋಬ್ಲರಾಯರ ಮನೇಲಿ ಒಂದು ಪಾಮರೇನಿಯನ್ ನಾಯಿ ಇತ್ತು. ಬೀದೀಲಿರೋ ಎಲ್ಲರನ್ನೂ ಕಚ್ಚೋ ಅಭ್ಯಾಸ. ನಾನೇ ಅದಕ್ಕೆ ಒಂದೆರಡು ಸಲ ಕಲ್ಲು ಹೊಡೆದಿದ್ದೆ)

To hell with ಅಹೋಬ್ಲ ರಾವ್! ಅಂತ ಇಬ್ಬರು ಪ್ರೇಮಿಗಳೂ ಮದುವೆಯಾಗಿ ಹಾಯಾಗಿರಬಹುದಿತ್ತು. ಆದರೆ ಹರೋಹರ ಸಭ್ಯಸ್ಥ. ಮಾವ ಆಗೋವರನ್ನ ಹೇಗಾದರೂ ಮಾಡಿ ಒಲಿಸಿಕೊಂಡೇ ಮದುವೆ ಆದರೆ ಮುಂದೆ ಜೀವನದಲ್ಲಿ ಸುಖಶಾಂತಿ ಸಿಗೋದು. ಮಾತ್ರವಲ್ಲ ಮಾವನ ಮನೇನೂ ತನಗೇ ದಕ್ಕುತ್ತೆ ಅಂತ ಅವನಿಗೆ ಗೊತ್ತಿತ್ತು. (ರೂಪಶ್ರೀ ಒಬ್ಬಳೇ ಮಗಳು). So, ಎಲ್ಲಾ ಲೌವ್‌ಸ್ಟೋರಿಗಳಲ್ಲಾಗೋ ಹಾಗೆ ಹರೋಹರ ಒಬ್ಬ ಸೂತ್ರಧಾರನ ಮೊರೆ ಹೊಕ್ಕ. ಆವನ ಹೆಸರು ಚಕ್ಕುಲಿ ರಾಮಸ್ವಾಮಿ ಅಂತ. ಹೌಸ್ ನಂ. 46. ರಾಮಸ್ವಾಮಿ ಮದುವೆ, ಮುಂಜಿ, ರಿಯಲ್ ಎಸ್ಟೇಟ್, ಚಕ್ಕುಲಿ ಕೋಡುಬಳೆಗಳಿಗೆ ಏಜೆಂಟು. ವ್ಯಾಪಾರವಿಲ್ಲದೆ ಹರೋಹರನ ತರಹಾನೇ ಮನೇಲೇ ಕುಂತಿರೋ ಪ್ರಾಣಿ. ಆದರೆ ಚುರುಕು ಬುದ್ಧಿ. ಒಂದು ಸಾವಿರ ರೂಪಾಯಿ ಕಮಿಶನ್ನು (50% ಅಡ್ವಾನ್ಸ್) ಸುಮಾರು ಐವತ್ತು ಕಾಫೀ ದೋಸೆಗಳಿಗೆ ಶರತ್ತು ಹಾಕಿಸಿಕೊಂಡು ಚಕ್ಕುಲಿ ರಾಮಸ್ವಾಮಿ ಹರೋಹರ-ರೂಪಶ್ರೀ ಜೋಡಿಗೆ ಕೆಳಕಂಡ ಪ್ರೊಫೆಶನಲ್ ಹೆಲ್ಪ್ ಕೊಟ್ಟ:

ಅ) ಅಹೋಬ್ಲರಾಯರ ಮನೆಗೆ ಹೋಗಿ ಡಾಕ್ಟರ್ ಹರೋಹರನ್ನ ಕೊಂಡಾಡೋದು.

ಆ) ಅಹೋಬ್ಲರಾಯರನ್ನ ನರ್ಸಿಂಗ್‌ಹೋಮ್‌ಗೆ ಕರ್ಕೊಂಡು ಹೋಗಿ ಬ್ಲಡ್ ಶುಗರ್ ಜಾಸ್ತಿಯಾಗೋ, ಇಸ್ನೋಫಿಲಿಯಾ ಜಾಸ್ತಿಯಾಗಿರೋ ಸುಳ್ಳು ಸರ್ಟಿಫಿಕೇಟ್ ಪಡೆದು, ಅಹೋಬ್ಲರಾಯರಿಗೆ ಗಾಬರಿ ಮಾಡಿಸೋದು.

ಇ) ಹೋಮಿಯೋಪತಿ ಡಾಕ್ಟ್ರಾದ್ರೂ ಪರವಾಗಿಲ್ಲ ಆದರೆ ಹರೋಹರನ ಔಷಧಿ ಟ್ರೈ ಮಾಡೀ ಅಂತ ಹರೋಹರನ ಕೈ ಮೂಲಕ ಪವರ್‌ಫುಲ್ ಇಂಗ್ಲೀಷ್ ಔಷಧಿಗಳನ್ನ ಹೋಮಿಯೋಪತಿ ಗುಳಿಗೆಗಳ ಹಾಗೆ ಮಾಡಿಕೊಡಿಸೋದು.

ಈ) ಮತ್ತೆ ನರ್ಸಿಂಗ್‌ಹೋಮ್‌ಗೆ ಕರ್ಕೊಂಡು ಹೋಗಿ (ಅಲ್ಲಿ ಲ್ಯಾಬ್ ಟೆಕ್ನೀಷಿಯನ್ ಚಕ್ಕುಲಿ ರಾಮಮೂರ್ತಿ ಸೋದರಮಾವಾನೇ!) ಬ್ಲಡ್‌ನಲ್ಲಿ ಶುಗರ್ರೇ ಇಲ್ಲವೇನೋ ಅನ್ನೋಹಾಗೆ ಇನ್ನೊಂದು ಸುಳ್ಳು ಸರ್ಟಿಫಿಕೇಟ್ ಕೊಡಿಸೋದು.

ಉ) ಅಹೋಬ್ಲರಾಯರು ಬೆಳಗಿನಿಂದ ರಾತ್ರಿವರೆಗೂ ಮನೇನಲ್ಲಿ ಕೂರುತ್ತಿದ್ದ ಈಸೀಚೇರ್ ಬಟ್ಟೇನ ಡ್ರೈಕ್ಲೀನ್ ಮಾಡಿಸಿ ಅದನ್ನನ ತಿಗಣೆಗಳಿಂದ ಮುಕ್ತಿಗೊಳಿಸಿ ಅಹೋಬ್ಲರಾಯರ so called ಅಲರ್ಜೀನ ಕಡಿಮೆ ಮಾಡೋದು (ತಾಂತ್ರಿಕ ಸಹಾಯ: ರೂಪಶ್ರೀ)

ಊ) ಕೆಲವು ಕಂತ್ರಿ ನಾಯಿಗಳನ್ನ ಹರೋಹರನ ಶಾಪ್ ಮುಂದೆ ಕಟ್ಟಿ ಹಾಕಿ, ಅಹೋಬ್ಲರಾಯರನ್ನ ಅಲ್ಲಿಗೇ ಕರ್ಕೊಂಡು ಬಂದು, ಹರೋಹರ ತನ್ನ ಸಂಪಾದನೆಯನ್ನೆಲ್ಲಾ ನಾಯಿ ಸೇವೆಗೇ ಸುರೀತಾನೇ ಅಂತ ಪ್ರಚಾರ ಮಾಡಿ ಅಹೋಬ್ಲರಾಯರ ಮನಸನ್ನ ಕರಗಿಸೋದು.

ಋ) ಡಾಕ್ಟರ್ ಹರೋಹರ ಬ್ಯಾಚುಲರ್ ತಾನೇ...? ಮನೇನಲ್ಲಿ ಕಾಲಕಳೆಯೋಕ್ಕೆ ಅಂತ ನಾಲ್ಕು ಪಾಮರೇನಿಯನ್ ನಾಯಿಗಳನ್ನ ಸಾಕಿದಾನೆ ಅಂತ ಅಹೋಬ್ಲರಾಯರಿಗೆ ಸುಳ್ಳು ವದಂತಿ ಕೊಡೋದು.

ಇಷ್ಟೆಲ್ಲಾ ಆದಮೇಲೆ ಏನಾಯ್ತು ಅಂತೀರಿ? ಅಹೋಬ್ಲರಾಯರೇ ಹರೋಹರ್‌ನ ಶಾಪ್‌ಗೆ ಬಂದು ಮಗಳನ್ನ ಮದುವೆ ಆಗ್ತೀಯಾ ಅಂತ ಪ್ರಪೋಸ್ ಮಾಡ್ಬಿಟ್ರು! ಹರೋಹರ ಗಂಭೀರವಾಗಿ, ''ಯೋಚನೆ ಮಾಡಿ ಹೇಳ್ತೀನಿ; ಸ್ವಲ್ಪ ಟೈಮ್ ಕೊಡೀ'' ಅಂತ ಸ್ಟಂಟ್ ಹಾಕಿದ. ಎರಡು ನಿಮಿಷ ಟೈಮ್ ತೊಗೊಂಡು ತಕ್ಷಣ ಒಪ್ಪಿಗೇನೂ ಕೊಟ್ಟ.

ಸರೀ, ಮದುವೇನೂ ಆಯ್ತು. ನಮ್ಮ ಬೀದಿಯಲ್ಲಿ ಎಲ್ಲೂ ಇಲ್ಲದ ಶಾಂತಿ ನೆಲೆಸ್ತು. ದೇವರ ದಯದಿಂದ ಅಹೋಬ್ಲರಾಯರ ಮನೆಯ ಪಾಮರೀನ್ ನಾಯಿ ಕೂಡ ಸತ್ತೇಹೋಯ್ತು. (ಚಕ್ಕುಲಿ ರಾಮಸ್ವಾಮಿ ಅದಕ್ಕೇನಾದರೂ ವಿಷ ಕೊಟ್ಟನೇ ಅಂತ ಕೆಲವರಿಗೆ ಸಂದೇಹಾನೂ ಬಂತು) All is well that ends up well ಅಂತಾರಲ್ಲಾ. ಹಾಗೇ ಈ ಲೌವ್ ಸ್ಟೋರೀ ಒಂದು ಸಾವಿರ ರೂಪಾಯಿ ಖರ್ಚಿನಲ್ಲಿ (ದೋಸೇ ಕಾಫೀ ಎಕ್ಸ್‌ಟ್ರಾ, 50% ಅಡ್ವಾನ್ಸ್) ಎಷ್ಟು ಚೆನ್ನಾಗಿ ಮುಕ್ತಾಯವಾಯ್ತು ನೋಡಿ. ಹರೋಹರ ರೂಪಶ್ರೀ ಸಂತೋಷವಾಗಿ ಓಡಾಡ್ಕೊಂಡಿದ್ದಾರೆ. ಅವರನ್ನ ನೋಡೋಕ್ಕೇ ಒಂದು ತರಹ ಚಂದ. ಅಹೋಬ್ಲರಾಯರೂ ಈಚೀಚೆಗೆ ಮೈಕ್ಕೈ ಕೆರೆದುಕೊಳ್ಳೋದು ಕಮ್ಮಿ ಆಗಿ, ಆವಾಗಾವಾಗ ಒಂದೆರಡು ಸ್ವೀಟ್‌ಗಳನ್ನೂ ತಿಂತಾರೆ. ತಮ್ಮ ಮನೆ ಆಸ್ತಿಗಳನ್ನೆಲ್ಲಾ ಮಗ ಅಳಿಯಂದಿರಿಗೇ ಬರ್ಕೊಡ್ತೀನಿ ಅಂತ ಅವರ ಹೆಂಡ್ತೀಗೆ ಹೇಳ್ತಿದಾರಂತೆ. ಈಗ ಡಯಾಬಿಟೀಸ್ ಅಂತ ಅಂದ್ರೆ ಅಷ್ಟೇನೂ ಗಾಬರಿ ಬೀಳಲ್ವಂತೆ.

ಪ್ರಿಯ ಓದುಗರೇ, ನಿಮಗೂ ಏನಾದರೂ ಮೇಲ್ಕಂಡಂಥ ಸಹಾಯ ಸರ್ವೀಸು ಬೇಕಿದ್ದರೆ, ನನ್ನನ್ನ ಸಂಪರ್ಕಿಸಿ. ನಾನೇ ಚಕ್ಕುಲಿ ರಾಮಸ್ವಾಮಿ.

★★★



# ಗೊರೂರು ತಿಳಿ ಹಾಸ್ಯದ ತಿರುಳು

– ಕೃಷ್ಣ ಸುಬ್ಬರಾವ್

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಹಾಸ್ಯಲೇಖಕರ ಸಾಲಿನಲ್ಲಿ ಅಗ್ರಗಣ್ಯರು. ಹೆಸರಿನೊಂದಿಗೆ ಊರಿನ ಹೆಸರು ಸೇರಿಸಿಕೊಳ್ಳುವುದು ಸಾಮಾನ್ಯ. ಆದರೆ ಗೊರೂರು (ಹಾಸನದ ಹತ್ತಿರವಿರುವ) ಕೇವಲ ರಾಮಸ್ವಾಮಿ ಅಯ್ಯಂಗಾರ್ ಹೆಸರಿನ ಮುಂದಿರುವ ಪದವಲ್ಲ. ಅವರ ಲೇಖನದಲ್ಲೆಲ್ಲಾ ನಮ್ಮ ಮುಂದೆ ನಿಲ್ಲುವ ಊರು. ಕೇವಲ ಹೇಮಾವತಿ ನದಿ, ದೇವಸ್ಥಾನ ಅದರ ರಥೋತ್ಸವದ ಸಂಭ್ರಮ ನಮ್ಮ ಕಣ್ಣುಮುಂದೆ ನಿಲ್ಲುವುದಿಲ್ಲ ಊರಿನಲ್ಲಿ ವಾಸಿಸುವ ಪ್ರತಿಯೊಂದು ಪ್ರಜೆಯನ್ನು ನಮಗೆ ಪರಿಚಯಿಸಿದ್ದಾರೆ. ಹಾಗೆ ಮಾಡುವಾಗ ನವಿರಾದ ತಿಳಿಹಾಸ್ಯದೊಂದಿಗೆ ಮಾನವ ಸ್ವಭಾವದ ಇಡೀ ದರ್ಶನ ಮಾಡಿಸುತ್ತಾರೆ. ಗೊರೂರರ ವೈಶಿಷ್ಟವೆಂದರೆ ಅದ್ಭುತ ವ್ಯಕ್ತಿ ಚಿತ್ರಣ. ಅವರು ಚಿತ್ರಿಸಿರುವ ಕಾಗೆದೇಶಿಕ, ಹೊಟ್ಟೆ ಸಂಪತ್ತಯ್ಯ, ಶೀನಪ್ಪ, ಬಬ್ರು ಹೀಗೆ ಅನೇಕ ವ್ಯಕ್ತಿಗಳು ನಮ್ಮ ಕಣ್ಮುಂದೆ ನಿಲ್ಲುತ್ತಾರೆ.

ಗೊರೂರ ಹಾಸ್ಯವಾಹಿನಿ ನಿರಂತರವಾಗಿ ಅವರ ಎಲ್ಲಾ ಲೇಖನಗಳಲ್ಲೂ ಮುಖ್ಯವಾಹಿನಿಯಲ್ಲೇ ಹರಿಯುತ್ತದೆ. ಪ್ರತ್ಯೇಕವಾದ ಅಥವಾ ಕೃತಕವಾದ ಹಾಸ್ಯ ಮಾರ್ಗವಿಲ್ಲ. ಅವರ ಅಪಾರ ಜೀವನೋತ್ಸಾಹದಿಂದಾಗಿ ಅವರಿಗೆ ಎಲ್ಲಾ ಸನ್ನಿವೇಶಗಳಲ್ಲೂ, ಜನರ ಮಾತಿನಲ್ಲಿ, ನಡವಳಿಕೆಯಲ್ಲಿ ಹಾಸ್ಯ ದರ್ಶನವಾಗುತ್ತದೆ. ಅದನ್ನು ತಮ್ಮ ಅಂತರಂಗಕ್ಕೆ ಇಳಿಸಿಕೊಂಡು ಸಾಮಾನ್ಯರಿಗೆ ಅರ್ಥವಾಗುವ ಭಾಷೆಯನ್ನು ಬಳಸಿಕೊಂಡು ರಸದೌತಣವನ್ನು ಕೊಡುತ್ತಾರೆ.

'ಗರುಡಗಂಬದ ದಾಸಯ್ಯ' ಎಂಬ ಪುಸ್ತಕಕ್ಕೆ ಮುನ್ನುಡಿ ಬರೆಯುತ್ತಾ ದ.ರಾ.ಬೇಂದ್ರೆಯುವರು ''... ಈ ನಾಡ ದಾಸಯ್ಯನಿದುರು ನನ್ನ ಶಂಕಪೂದುವುದೇಕೆ?... ಆದರೂ ಈ ಅವಕಾಶವೂ ನನಗೆ ಒಂದು ಗೌರವ'' ಎಂದಿದ್ದಾರೆ. ತಮ್ಮೂರಿನ ಹೊಲಗೇರಿಯ ಆದಿಕರ್ನಾಟಕರು ಭಜನೆಗೆ ಬೇಕಾಗುವ ಗರುಡಗಂಬ ಕೇಳಿದ್ದರೆಂದು ಬೆಂಗಳೂರಿಗೆ ಬಂದಾಗ ಕೊಂಡು ಅದರಿಂದ ಪಡುವ ಪಾಡನ್ನು ಬಹಳ ಸೊಗಸಾಗಿ ವರ್ಣಿಸುತ್ತಾರೆ. ಅಫೀಮಿಗೋಸ್ಕರ ಗರುಡಗಂಬವನ್ನು ಬಹಳ ಕಮ್ಮಿ ಬೆಲೆಗೆ ಮಾರುವ ಒಬ್ಬ ಸಾಧುವಿನಿಂದ ಕೊಳ್ಳುತ್ತಾರೆ. ಸ್ನೇಹಿತನ ರೂಂಗೆ ಹೋದಾಗ ಅಲ್ಲಿ ಕುಳಿತ್ತಿದ್ದ ಕೆಲವರು ಗೊರೂರನ್ನೆ ದಾಸಯ್ಯನೆಂದು

ತಿಳಿದು ''ಪರವಾಗಿಲ್ಲ, ನಿನಗೆ ದಾಸಯ್ಯನ ಸ್ನೇಹವೂ ಇದೆ'' ಎನ್ನುತ್ತಾರೆ. ಇದಕ್ಕೆ ಕಾರಣ ಕೊಳೆಯಾಗಿದ್ದ ಪಂಚೆ ಹಾಗೂ ಎರಡು ಮೂರು ದಿನದಿಂದ ಗಡ್ಡ ತೆಗೆಯದದ್ದು ಎನ್ನುತ್ತಾರೆ. ಅದನ್ನು ತೆಗೆದುಕೊಂಡು ಊರಿಗೆ ವಾಪಸ್ಸಾಗುವಾಗ ಬಟ್ಟೆಯಲ್ಲಿ ಗರುಡಗಂಬ ಸುತ್ತಿಡಲು ಹೋದರೆ ಅದರಲ್ಲಿದ್ದ ಎಣ್ಣೆ ಅಡ್ಡಬಂತಂತೆ ಕಡೆಗೆ ಊರಿನಲ್ಲಿ ಇಳಿದಾಗ ಯಾರಾದರೂ 'ದಾಸಯ್ಯ' ಎಂದರೆ ಎಂಬ ಭಯದಿಂದ ಸ್ಟೇಷನ್‌ನಿಂದ ಕತ್ತಲಲ್ಲಿ ಓಡಿದಾಗ ಟಿ.ಸಿ. ''ಟಿಕೆಟ್ ಇಲ್ಲದೆ ಆ ಕಡೆ ಓಡುತ್ತಿರುವ ದಾಸಯ್ಯ'' ಎಂದು ಕೂಗುತ್ತಾರೆ. ಆಗ ಯಮಕೋಪ ಬಂದು ''ನಿಮ್ಮಪ್ಪ ದಾಸಯ್ಯ'' ಎಂದು ರೇಗಿ ಟಿಕೆಟನ್ನು ಅವನ ಮುಖದ ಮುಂದೆ ಎಸೆದು ಹೋಗುತ್ತಾರೆ.



ಗೊರೂರರ ಕಲೆಯು ಎಲ್ಲಿಂದಲೋ ರಫ್ತಾಗಿ ಬಂದ ಸೀಮೆ ಛಾಪಿನ ಸರಕಲ್ಲ. ಅದು ಜಾನಪದ ಜೀವನದ ಸೊಗಡು. 'ಕ್ಷೌರಸಂಹಿತೆ' ಎಂಬ ಲೇಖನದಲ್ಲಿ ಒಬ್ಬ ಕ್ಷೌರಿಕ ಗೊರೂರರ 'ಹಾರವಯ್ಯ ಹಜಾಮನಾದ' ಬಗ್ಗೆ ಕ್ಷೌರ ಮಾಡುವಾಗ ವಿಚಾರಿಸುತ್ತಾನೆ. ಅವನ ಕೈಯಲ್ಲಿ ಕತ್ತಿ ಹಾಗೂ ಗೊರೂರ ತಲೆ ಇದ್ದುದರಿಂದ ಲೇಖಕರು ಬೆವರುತ್ತಾ ''ನೀನು ಆ ಕಥೆ ಓದಿದ್ಯಾ?'' ಎಂದು ಕೇಳುತ್ತಾರೆ. ಆಗ ಕ್ಷೌರಿಕ ''ಇಲ್ಲಾ ಸಾರ್, ನಾನು ಓದಿಲ್ಲ ಪಕ್ಕದ ಮನೆಯವರು ಹೇಳಿದರು'' ಎಂದಾಗ

ಹೋದ ಜೀವ ಬಂದಂತಾಗಿ ''ಹಾಗಾದರೆ ನಾನು ಕೊಡುತ್ತೇನೆ ಓದು. ಅದರಲ್ಲಿ ನಿಮ್ಮ ವರ್ಗವನ್ನಾಗಲಿ ವೃತ್ತಿಯನ್ನಾಗಲಿ ಹೀಯಾಳಿಸಿಲ್ಲ'' ಎಂದು ಹೇಳಿ ಸೆಲೂನಿನಿಂದ ಹೊರಬರುತ್ತಾರೆ. ಮುನಿಯಪ್ಪ ಎಂಬ ಮತ್ತೊಬ್ಬ ಕ್ಷೌರಿಕನನ್ನು ವರ್ಣಿಸುವಾಗ ''... ಬಂದು ಕುಳಿತವರು ಎಷ್ಟೇ ಸ್ವಾರಸ್ಯದಿಂದ ವಿನೋದದಿಂದ ರಂಜಿತನಾದ ಮಾತುಕಥೆಯಾಡುತ್ತಿರಲಿ ಅವನು ಅದನ್ನು ಗಮನಿಸಿದೆ ಏಕಾಗ್ರವಾಗಿ ಕ್ಷೌರ ಮಾಡ್ತಾನೆ. ಆತುರ ಪಡಿಸಿದರೆ ಇದು ಕತ್ತಿಯ ವಿಷಯ ಆತುರ ಪಡಿಸಬೇಡಿ ಅನ್ನುತ್ತಾನೆ.

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮೈಸೂರಿಗೆ ಹೋದಾಗ ಮಾಮೂಲಿನ ಕ್ಷೌರದ ಅಂಗಡಿಗೆ ಹೋದಾಗ ಅವನು ತನ್ನ ಅಂಗಡಿಯಲ್ಲಿ ಅರ್ಧಭಾಗವನ್ನು ಪ್ರತ್ಯೇಕಿಸಿ ಪುಸ್ತಕದ ಅಂಗಡಿ ಮಾಡಿದ್ದ. ಅಯ್ಯಂಗಾರರು ''ಇದೇನಯ್ಯ?'' ಎಂದು ಕೇಳಿದಾಗ ''ಈಚೆಗೆ ಕ್ಷೌರದ ಗಿರಾಕಿಗಳು ಇಲ್ಲ ಆದ್ದರಿಂದ ಅರ್ಧ ಅಂಗಡಿ ಪುಸ್ತಕ ಇಟ್ಟಿದ್ದೇನೆ''

''ಅಲ್ಲಯ್ಯ ಪುಸ್ತಕ ಇದ್ದರೆ ಏನ್ ವ್ಯಾಪಾರವಾಗುತ್ತಯ್ಯ, ಅದರ ಬದಲು ಬೀಡಿ ಸಿಗರೇಟು ಇದ್ದರೆ ಒಳ್ಳೆದಾಗುತ್ತಿತ್ತು'' ಎಂದಾಗ ಅಂಗಡಿಯವನು ''ಅದೇನೋ ನಿಜ ಸಾರ್. ಆದರೆ ಬೀಡಿ ಸಿಗರೇಟುಗಳನ್ನು ಸಾಲ ಕೊಡುವುದಿಲ್ಲವಲ್ಲ!'' ಎನ್ನಬೇಕೆ?

'ವಿರೋದಾಭಾಸ' ಎಂಬ ಲೇಖನದಲ್ಲಿ ತಮಗಾದ ಇನ್ನೊಂದು ಅನುಭವವನ್ನು ಚಿತ್ರಿಸುತ್ತಾರೆ. ಬಾರಿ ಜನಸಂದಣಿಯಿರುವ ಬಸ್ಸನ್ನು ಹತ್ತಿದಾಗ ಯಾರೂ ಗುರುತು ಹಿಡಿಯುವುದಿಲ್ಲ, ಕಡೇಪಕ್ಷ ಹಿರಿಯರೆಂದೂ ತಮ್ಮ ಸೀಟನ್ನು ಬಿಟ್ಟುಕೊಡುವುದಿಲ್ಲ, ನಿಂತೆ ಪ್ರಯಾಣ ಮಾಡುತ್ತಾರೆ. ಆದರೆ ಒಬ್ಬ ಯುವಕ ಮಾತ್ರ ಅವರನ್ನೇ ತದೇಕ ದೃಷ್ಟಿಯಿಂದ ನೋಡುತ್ತಿರುತ್ತಾನೆ. ಕಡೆಗೆ ಅವನ ನಿಲ್ದಾಣ ಬಂದಾಗ ಬಗ್ಗಿ ರಾಮಸ್ವಾಮಿಯವರ ಎರಡು ಕಾಲುಗಳನ್ನು ಹಿಡಿಯುತ್ತಾನೆ. ಗೊರೂರರಿಗೆ ಬಹಳ ಸಂತೋಷನೆಮ್ಮದಿಯಾಗಿ ಕೈಹಿಡಿದು ''ಏಳಪ್ಪಾ, ಇದೇನು ಹೀಗೆ ಮಾಡ್ತೀಯಾ?'' ಎನ್ನುತ್ತಾರೆ ಹಾಗೆ ಅವನ ಜೊತೆಗಿದ್ದ ಹಿರಿಯರನ್ನು ಕುರಿತು ''ಎಷ್ಟು ಒಳ್ಳೆ ನಡತೆಯುಳ್ಳವನು, ನನಗೆ ನಮಸ್ಕಾರ ಮಾಡಿದ, ಅವನಿಗೆ ನನ್ನ ಪರಿಚಯ ಇದೆಯೇ?'' ಎಂದು ಕೇಳಿ ''ನೀವು ಎಲ್ಲಿಯವರು?'' ಎಂದು ವಿಚಾರಿಸುತ್ತಾರೆ. ''ಸಾರ್ ಇವನಿಗೆ ಸ್ವಲ್ಪ ತಲೆ ಸರಿಯಾಗಿಲ್ಲ ಇವನು ಎಲ್ಲರಿಗೂ ಹೀಗೆ ಮಾಡ್ತಾನೆ ನೀವು ಏನು ತಿಳಿದುಕೊಳ್ಳಬೇಡಿ'' ಎಂದು ಹೇಳಿ ಬಸ್‌ನಿಂದ ಹೊರಗೆ ಹೋದರೆ ಗೊರೂರ ಸ್ಥಿತಿ ಏನಾಗಿರಬಹುದು ಊಹಿಸಿ ಎನ್ನುತ್ತಾರೆ ತಮ್ಮ ಲೇಖನದಲ್ಲಿ.

ಮದುವೆಯಾದ ಮೊದಲನೆ ದೀಪಾವಳಿ ಅಳಿಯನಿಗೆ ಉಪಚಾರ ಸಂಪ್ರದಾಯ ಆದರೆ ಅಳಿಯ ಹೋಗಲು ಆಗದಿದ್ದರೆ ಯಾರಿಗೆ ನಷ್ಟ. ಗೊರೂರರ 'ಮಾವನ ಮೊದಲ ದೀಪಾವಳಿ' ಲೇಖನ ಓದಿದರೆ ಪ್ರಶ್ನೆಗೆ ಉತ್ತರ ಸಿಗುತ್ತದೆ. ರಜವಿಲ್ಲವೆಂದೂ

ಬೇರೆ ಊರಿನಲ್ಲಿರುವ ಮಗ ಬೀಗರ ಮನೆಗೆ ದೀಪಾವಳಿಗೆ ಹೋಗಲಾಗುವುದಿಲ್ಲ ಎಂದಾಗ ಅವನ ತಾಯಿ ಪ್ರತಿಕ್ರಿಯೆ ನೋಡಿ ''... ಬೀಗರು ಕೊಡಬೇಕಾದ ಸನ್ಮಾನಗಳು ಅವರಿಗೂ ಉಳಿದುಹೋಯಿತಲ್ಲ! ಈಗಿಲ್ಲದಿದ್ದರೆ ನಾಳೆ ಕೊಡುತ್ತಾರೆಯೆ? ಆ ಬೀಗಿತ್ತಿಯು ಕೊಬ್ಬನ್ನು ಇಳಿಸಬೇಕೆಂದು ಮದುವೆಯಾದುದರಿಂದ ಕಾಯುತ್ತಿದೆ ಅಬ್ಬ' ಏನು ಅವಳ ಅಹಂಕಾರ! ಧಾರೆ ನೀರು ಕೈಗೆ ಬಿದ್ದ ಕೂಡಲೇ ನಮ್ಮನ್ನು ಕಾಲುಕಸ ಮಾಡಿಬಿಟ್ಟಳು. ದೇವರ ದಯೆಯಿಂದ ದೀಪಾವಳಿ ಇದೆ. ನೂರು ಬಾರಿ, ಸಾವಿರ ಬಾರಿ ಕಾಲು ಕಟ್ಟಿಸುತ್ತೇನೆ ಅಂತ ಪಣ ತೊಟ್ಟಿದ್ದ ಶ್ರೀನಿವಾಸ ಅದರ ತಲೆಯ ಮೇಲೂ ಕಲ್ಲು ಹಾಕಿದ. ಕಡೆಗೆ ಮಗ ಬರದಿದ್ದರೂ ತಾವೇ ಬೀಗರ ಮನೆಗೆ ಹೋಗಿ, ತಮ್ಮ ಮಗಳ ಗಂಡನಿಗೂ ಅದೇ ಮೊದಲನೇ ದೀಪಾವಳಿ ಆದ್ದರಿಂದ ಅವರನ್ನೂ ಮಗನ ಮಾವನ ಮನೆಗೆ ಕರೆದು ತಾವು ಕೊಡಬೇಕಾದ ಉಡುಗೊರೆ, ಆತಿಥ್ಯವನ್ನು ಕೊಡಿಸುವ ಹುನ್ನಾರ ಮಾಡ್ತಾರೆ.

ಗೊರೂರ ಹೇಮಾವತಿ ತೀರದಲ್ಲಿ, ಬೈಲಹಳ್ಳಿ ಸರ್ವೆ ಕೊನಷ್ಟ್ಯೆ ಕಥೆಗಳು, ನಮ್ಮೂರಿನ ರಸಿಕರು, ಹಳೆಯ ಪಳೆಯ ಮುಖಗಳು ಬೆಸ್ತರ ಕರಿಯ ಹೀಗೆ ಅನೇಕ ಪ್ರಬಂಧಗಳು ಒಂದಕ್ಕಿಂತ ಒಂದು ಹೆಚ್ಚು ಸ್ವಾರಸ್ಯಕರವಾಗಿದೆ. ಅವರ ಸಾಹಿತ್ಯ ಕೃಷಿಯ ಸಮಗ್ರ ಅಧ್ಯಯನವೆಂದರೆ ಅವರ ಕಾದಂಬರಿ (ಸಾಮಾಜಿಕ ಹಾಗೂ ಐತಿಹಾಸಿಕ) ಹಾಗೂ ಅವರ ಗಾಂಧಿ ನಿಷ್ಠೆ, ಎಲ್ಲಾ ಜಾತಿಯವರನ್ನು ಹೊಂದಿಕೊಂಡು ಹೋಗುವುದು ಅದರಲ್ಲೂ ದಲಿತರ ಸಮಸ್ಯೆಯನ್ನು 'ಹೇಮಾವತಿ' ಯಲ್ಲಿ ಕಾಣಬಹುದು. ಕೈಲಾಸಂ, ನಾ. ಕಸ್ತೂರಿಯಂತೆ ಗೊರೂರು ಕೂಡ ಮಾಡಿರುವುದೇ ಸಮಾಜ ಸೇವೆ. ಅವರ ಚಿಂತನೆಯನ್ನು ಹಾಸ್ಯವಾಹಿನಿಯಲ್ಲಿ ಹರಿಯಬಿಟ್ಟರು. ಎಷ್ಟು ಓದಿದರೂ ಹೊಸ ಹೊಸ ಆಯಾಮಗಳನ್ನು ಕಾಣುತ್ತಾ ಹೋಗಬಹುದು.



ಪ್ರಗತಿ ಪಥ

# ಹೊಯ್(ಲಾರದ) ಸಳ

- ನಾರೂಶ್ರೀ ಸೂರಿ

ಹಿಸ್ಟರಿ ಟೀಚರ್ ಶಾಮರಾಯರು ಮನೇನಲ್ಲಿ ಜಾರಿಬಿದ್ದು ಕಾಲು ಉಳುಕು ಹಿಡಿದಿದ್ದರೂ ಕೋಲು ಊರಿಕೊಂಡು ಬಂದು ಕ್ಲಾಸ್ ತಗೊಂಡಾಗ ಸೆವೆಂತ್ ಸ್ಟಾಂಡರ್ಡ್ ಹುಡುಗರಿಗೆ ತುಂಬಾನೇ ನಿರಾಸೆ ಆಯಿತು. ಕಾಲು ಉಳುಕಿದೆ, ನಿಲ್ಲೋಕ್ಕಾಗೊಲ್ಲ ನಡೆಯೋಕ್ಕೆ ಆಗೊಲ್ಲ ಅಂತ ಅವರು ಮನೇನಲ್ಲೇ ಇದ್ದುಬಿಟ್ಟಿದ್ರೆ? - ಆ ಪೀರಿಯಡ್ಡು let-off ಅಂತ ಆಗಿರತಿತ್ತೋ!

''ಇವತ್ತು ನನಗೆ ನಿಂತುಕೊಂಡು ಪಾಠ ಮಾಡೋಕ್ಕೆ ಆಗುತ್ತಿಲ್ಲ. ಹಾಗಾಗಿ ನಾನು ಮೊನ್ನೆ ಮಾಡಿದ್ದೆನಲ್ಲ, ಆ ಪಾಠದ ಬಗ್ಗೆ ನಿಮ್ಮನ್ನೆಲ್ಲ oral test ಮಾಡತೀನಿ... ಮೊದಲನೆ ಕೊಶ್ಚನ್ನು, ನೀನು ಉತ್ತರ ಕೊಡು, ಪ್ರದೀಪ... ವಿಷ್ಣುವರ್ಧನ ಅಂದ್ರೆ ಯಾರೋ?...''

''ಅದೇ ಸಾರ್, ಯಜಮಾನ ಪಿಕ್ಚರ್‌ನಲ್ಲಿ ಯಜಮಾನನ ರೋಲ್‌ನಲ್ಲಿ ಬೊಂಬಾಟ್ ಆ್ಯಕ್ಟ್ ಮಾಡಿದ್ದಾರಲ್ಲ ಸಾರ್, ಅವರೇನೇ ವಿಷ್ಣುವರ್ಧನ್...''

''ನಿನ್ನ ಪಿಂಡ... ನೀನು ಹೇಳೋ, ಜಗದೀಶ...''

''ಅವನು ಹೇಳತಾ ಇರೋದು ಸರೀನೇ ಸಾರ್... ಆದರೆ ಸೂರ್ಯವಂಶದಲ್ಲಿ ಅವರ ರೋಲ್, ಸೂಪರ್ ಸಾರ್, ಸೂಪರ್''

''ಬಡಕೋಬೇಕು... ಹೋಗಲಿ ಮುಂದಿನ್ ಕೊಶ್ಚನ್... ನೀನು ಹೇಳೋ ಶಶಿಧರ... ಹೊಯ್ಸಳರು ಅಂದ್ರೆ ಯಾರೂ ಅಂತ..''

''ಹೊಯ್ಸಳರು ಅಂದ್ರೆ ಅವ್ರೇ ಸಾರ್, ಮಿಕ್ಕ ಪೋಲೀಸ್‌ನೋರು ನೀಲಿ ವ್ಯಾನ್‌ನಲ್ಲಿ ಓಡಾಡತಾ ಇದ್ರೆ ಇವರು ಬಿಳೀ ವ್ಯಾನ್‌ನಲ್ಲಿ ಕೂತಿರತಾರಲ್ಲ, ಆ ಪೋಲೀಸಿನೋರು''

"Mid-term exam ಮುಂದಿನ ವಾರ... ನಿಮ್ಮ preparation ಲಕ್ಷಣ ನೋಡಿದ್ರೆ ಹೀಗೆ... ಹಾಳಾಗಿ ಹೋಗ್ಲಿ, ಮುಂದಿನ ತಿಂಗಳು ಬೇಲೂರು, ಹಳೇಬೀಡು ಅಂತ ಟ್ರಿಪ್ ಹೋಗತಾ ಇದ್ದೀರಲ್ಲ, ಅಲ್ಲಿರೋ ದೇವಸ್ಥಾನಗಳನ್ನ ಕಟ್ಟಿಸಿದೋನು ವಿಷ್ಣುವರ್ಧನ, ಅವನು ಈ ಗೂಪೆ ಜಗದೀಶ ಹೇಳತಿರೋ ರೀತಿ ಸೂರ್ಯವಂಶಕ್ಕೆ ಸೇರಿದೋನಲ್ಲ, ಹೊಯ್ಸಳ ವಂಶಕ್ಕೆ ಸೇರಿದೋನು... ಅವರಿಗೆ ಈ ಹೊಯ್ಸಳ ಅನ್ನೋ ಹೆಸರು ಹ್ಯಾಗೆ ಬಂತು ಅನ್ನೋದಕ್ಕೆ ಒಂದು ಕಥೆ ಇದೆ - ಹೇಳತೀನಿ, ಕೇಳಿ...''

ಈ ರೀತಿ ಚರಿತ್ರೇಗೆ ಸಂಬಂಧಪಟ್ಟ ಕಥೆಗಳನ್ನ ಹೇಳೋವಾಗ ರಾಮರಾಯರಿಗೆ ಎಲ್ಲೂ ಇಲ್ಲದ ಉತ್ಸಾಹ ಬಂದುಬಿಡತ್ತೆ - ಇವತ್ತೂ ಹಾಗೇನೆ... ಗುರುಗಳು ಪಾಠ ಹೇಳತಿರೋವಾಗ ಮಠದೊಳಗೆ ಆ ಹುಲಿ ಬಂದಿದ್ದು, ಮಿಕ್ಕ ಶಿಷ್ಯರೆಲ್ಲಾ ಹೆದರಿಕೊಂಡು ಓಡಿಹೋಗಿದ್ದು, ಧೈರ್ಯವಾಗಿ ಅಲ್ಲೇ ಉಳಕೊಂಡಿದ್ದ ಸಳನ ಕೈಗೆ ಒಂದು ಸಲಾಕಿನ ಕೊಟ್ಟು ಹೋಯ್, ಸಳ ಅಂತ ಗುರುಗಳು ಹೇಳಿದ್ದು, ಅವನು ಆ ಹುಲೀನ ಕೊಂದದ್ದು, ಅನ್ನೋದನ್ನೆಲ್ಲಾ ಕೇಳತಾಕೇಳತಾ ಹುಡುಗರು ಎಲ್ಲರಿಗೂ ಒಂದು ಥರ ಆವೇಶ ಬಂದಹಾಗೆ ಆಗಿಹೋಗಿತ್ತು ಮೈಮೇಲೆ.

ಕಥೆ ಕೇಳೋದು ಮುಗಿದ ಮೇಲೆ ಸ್ಕೂಲಿನಲ್ಲಿ ಕರಾಟೆ ವಿದ್ವಾಂಸ ಅಂತ ಹೆಸರು ತಗೊಂಡಿದ್ದ ಕ್ಲಾಸ್ ಮಾನೀಟರ್ ದೇವರಾಜು ಹೇಳಿದ -

''ಸಾರ್, ನೀವು ನಮಗೆ ಕ್ಲಾಸ್‌ನೊಳಗೆ ಪಾಠ ಹೇಳತಾ ಇರೋವಾಗ ಏನಾದ್ರೂ ಈ ಥರ ಹುಲೀ ಗಿಲೀ ನುಗ್ಗಿ ಬಂದ್ರೆ ಸಾರ್, ನಾನು ಒಂದೇ ಒಂದು karate chop ಅಂತ ಕೊಟ್ಟು ಅದನ್ನ ಅಲ್ಲೇ ಹುಟ್ಟಲಿಲ್ಲ ಅನ್ನಿಸಿಬಿಡತೀನಿ....''

''ಹಯ್ಯೋ, ಗೂಬೆಮುಂಡೇದೆ... ಈ ಕ್ಲಾಸ್‌ನೊಳಗಡೆ ಹುಲಿಬರೋದು, ನೀನು ಅದನ್ನ ಬರೀಕೈನಲ್ಲಿ ಕೊಂದುಹಾಕೋದು, ಹುಂಜ ಮೊಟ್ಟೆ ಇಡೋದು ಎಲ್ಲಾ ಒಂದೇ ದಿನ... ಈ ಸ್ಕೂಲ್ ಸುತ್ತಮುತ್ತ ಮೂರು ಹೊತ್ತೂ ಹೊಡಕೋತ ನಿಂತಿರತ್ತೆಲ್ಲ, ಆ ಪೋಲಿನಾಯಿಗಳೇ ಇಲ್ಲೀ ತನಕ ಒಳಗೆ ನುಗ್ಗಿ ಬಂದಿಲ್ಲ, ಅಂಥದ್ರಲ್ಲಿ...''



ಅದು ಯಾವ ಬಾಯಲ್ಲಿ ಅವರು ಹಾಗಂದ್ರೋ, ಒಂದು ಗಡವ ಬೀದಿನಾಯಿ ಎಂದೂ ಇಲ್ಲದ್ದು ಕ್ಲಾಸ್‌ರೂಂ ಒಳಗೆ ಅದೇ ಟೈಂನಲ್ಲಿ ನುಗ್ಗಿಬಂದು ಶಾಮರಾಯರ ಕುರ್ಚಿ ಪಕ್ಕದಲ್ಲೇ ಬೊಗಳತಾ ನಿಂತುಕೋತು. ಅದಕ್ಕೆ ಹೆದರಿಕೊಂಡು ಹುಡುಗರೆಲ್ಲಾ ಹೊರಗೆ ಓಡಿಹೋದರು - ಉಳಕೊಂಡೋರು ಅಂದ್ರೆ ಮೇಷ್ಟ್ರು ಮತ್ತೆ ಆ ದೇವರಾಜ.

ಮೇಷ್ಟ್ರು ಅಂದುಕೊಂಡರು - ಎಂಥಾ ಗ್ರಹಚಾರ! ನಿನ್ನೆ ನೋಡಿದ್ರೆ ಕಾಲು ಉಳಕ್ತು, ಇವತ್ತು ನೋಡಿದ್ರೆ ಇಲ್ಲಿ ಈ ನಾಯಿ! ಅದು ಇನ್ನೇನು ಮಾಡಿಹೋಗತ್ತೋ? ಜನ ಏನೋ ಹೇಳತಾರೆ, ಬೊಗಳೋನಾಯಿ ಕಚ್ಚೋಲ್ಲ ಅಂತ. ಆದರೆ ಹಾಗಂತ ಆ ನಾಯಿಗೆ ಗೊತ್ತಿರಬೇಕಲ್ಲ!

''ಲೋ ದೇವರಾಜ, ನಾಕು ಏಟುಕೊಟ್ಟು ಈ ನಾಯಿಮುಂಡೇದನ್ನ ಇಲ್ಲಿಂದ್ ಓಡಿಸೋ... ಎಲ್ಲಾದ್ರೂ ಕಚ್ಚಿಗಿಚ್ಚಿಬಿಟ್ಟೀತು...'' ಅಂತ ಹೇಳಿ ತಮ್ಮ ಕೋಲನ್ನ ಅವನ ಕಡೆ ಎಸೆದ್ರು.

ಆದ್ರೆ ಆ ದೇವರಾಜ, ಅವನೇನು ಮಾಡಿದ?

''ಸರ್, ಈ ನಾಯೀನ ಹೊಡೆಯೋದು... ಅದು ನನ್ನ ಕೈನಲ್ಲಿ ಆಗೊಲ್ಲ... ನನಗೆ ತುಂಬಾ ಹೆದರಿಕೆ.''

''ಅರೆ ಇವನ! ಮತ್ತೆ ಈಗತಾನೇ ಹೇಳತಾ ಇದ್ದಿ - ಹುಲಿ ಬರಲಿ ಕೊಂದುಹಾಕತೀನಿ ಅಂತ...''

''ಹುಲೀನ ಕೊಂದುಹಾಕೋದು, ಮತ್ತೆ ನಾಯೀನ ಹೊಡೆದು ಓಡಿಸೋದು ಅಂದ್ರೆ, ಒಂದೇ ಥರಾ ಅಂದುಕೊಂಡ್ರಾ, ಸಾರ್?...''

''ಅದೇನೋ ನಿನ್ನ ಮಾತಿನ ಅರ್ಥ?...''

''ಸಾರ್, ಮುಂದಿನ ಬೀದೀ ಕೊನೇ ಮನೇನಲ್ಲಿ ಪೋಲೀಸ್ ಸರ್ಕಲ್ ಇನ್ಸ್‌ಪೆಕ್ಟರ್ ಹನುಮಂತಪ್ಪನವರು ಇದಾರೆ, ಗೊತ್ತಾ ಸಾರ್?''

''ನಾಯೀನ ಹೊಡೆಯೋ ಅಂದರೆ ಸರ್ಕಲ್ ಇನ್ಸ್‌ಪೆಕ್ಟರ್ ಕಥೆ ಬಿಚ್ಚಿಕೊಂಡ....''

''ಅವರಲ್ಲ ಸಾರ್, ಅವರ ಹೆಂಡತಿ ಪುಟ್ಟಲಕ್ಷಮ್ಮನೋರು ಅವರದ್ದು ನನಗೆ ಹೆದರಿಕೆ...''

''ಆ ಪುಟ್ಟಲಕ್ಷ್ಮಮ್ನ ಕಂಡ್ರೆ ಹೆದರಿಕೋಬೇಕಾಗಿದ್ದು ಅವರನ್ನ ಕಟ್ಟಿಕೊಂಡಿರೋ ಆ ಸರ್ಕಲ್ ಇನ್ಸ್‌ಪೆಕ್ಟರ್ ಹನುಮಂತಪ್ಪನವರೇ ಹೊರತು ನೀನಲ್ಲವಲ್ಲ...''

''ಅದೇ ನಿಮಗೆ ಗೊತ್ತಿಲ್ಲ ಅನ್ನೋದು... ಆ ಪುಟ್ಟಲಕ್ಷ್ಮಮ್ಮ ಅದೆಂಥದ್ದೋ ಪ್ರಾಣಿದಯಾ ಸಂಘ ಅಂತ ಮಾಡಿಕೊಂಡಿದ್ದಾರಂತೆ ಸಾರ್. ಅದಕ್ಕೆ ಪರದೇಶಗಳಿಂದ ದುಡ್ಡೂ ಬರುತ್ತಂತೆ. ಆ ಸಂಘದವರ ಪ್ರಕಾರ ಇಲ್ಲಿ ಬಂದಿರೋ ಥರದ್ದು ಬೀದಿನಾಯಿಗಳಿಗೆ ಕಲ್ಲು ಹೊಡೆಯೋದು, ಕೋಲಿಂದ ಹೊಡೆಯೋದು ಅನ್ನೋದು ಯಾರೂ ಮಾಡಕೂಡದಂತೆ. ಹಾಗೆ ಯಾರಾದ್ರು ಮಾಡಿದ್ರೂ ಅಂದ್ರೆ ಅವರಿಗೆ...''

''ಅವರಿಗೆ ಏನಾಗತ್ತಂತೆ?...''

''ತಲೆಮೇಲೆ ಹೊಡೆದಿದ್ರೆ ತಲೇಮೇಲೆ, ಮೂತಿಮೇಲೆ ಹೊಡೆದಿದ್ರೆ ಮೂತಿಮೇಲೆ, ಕಾಲಮೇಲೆ ಹೊಡೆದಿದ್ರೆ ಕಾಲಮೇಲೆ ಅಂತ ಅವರಿಗೂ One-to ten ಲೆಕ್ಕದಲ್ಲಿ ಅಂದ್ರೆ ನಾಯಿಗೆ ಒಂದು ಏಟು ಕೊಟ್ಟಿದ್ರೆ ಅವರಿಗೆ ಹತ್ತು ಏಟು - ಆ ಥರ ಒದೆ ಕೊಡಿಸ್ತಾರಂತೆ...''

''ನೀನು ಹುಡುಗ ಪಡುಗ... ನಿನಗೆ ಹಾಗೆ ಮಾಡಬಹುದು. ಆದ್ರೆ ನಾನೇ ಒಂದುವೇಳೆ ನಾಯೀನ ಹೊಡೆದ್ರೆ?...''

''ನಿಮಗೂ ಅಷ್ಟೆ... ಹುಡುಗ್ರು, ವಯಸ್ಸಾದವರು, ನಾಯೀ ಕೈನಲ್ಲಿ ಕಚ್ಚಿಸ್ಕೊಂಡೋರು ಅಂತ ಯಾವನದ್ದೂ ಮುಲಾಜೇ ನೋಡೊಲ್ಲವಂತೆ...''

''ಯಾರಾದ್ರೂ ನಂಬೋ ಅಂಥ ಮಾತೇನೋ ಇದು?... ಈ ಥರದ್ದು ಶಿಕ್ಷೆ ಕೊಡಬಹುದೂ ಅಂತ ಯಾವ ಕಾನೂನಲ್ಲಿ ಇದ್ಯೋ?''

''ಕಾನೂನು, ಕೋರ್ಟು ಅನ್ನೋವೆಲ್ಲ ಯಾಕೆ ಬೇಕು, ಆ ಯಮ್ಮನಿಗೆ? ಸ್ಟೇಷನ್‌ಗೆ ಫೋನ್ ಮಾಡಿ ಯಾರಾದ್ರೂ ಕಾನ್ಸ್‌ಟೇಬಲ್ ಮೇಲೆ ರೋಫ್ ಹಾಕಿ ಕೆಲಸ ಮಾಡಿಸ್ಕೋತಾರೆ ಅಷ್ಟೆ.''

ಶಾಮರಾಯರಿಗೆ ಈಗ ಒಂದೇ ಪೀಕಲಾಟಕ್ಕೆ ಬಂತು. ಹೋಗಲಿ ಅಂತ ಬಿಟ್ಟುಬಿಟ್ರೆ ನಾಯಿ ಏನು ಮಾಡುತ್ತೋ ಹೇಳೋಕ್ಕೆ ಬರೊಲ್ಲ. ಎರಡು ಕೊಟ್ಟು ಆಚೆಗೆ ಓಡಿಸೋಣ ಅಂದ್ರೆ, ನಾಳೆ ದಿನ ಸ್ಟೇಷನ್‌ನಲ್ಲಿ this part of the programme is sponsored by Puttalakshamma ಅಂತ ಒದೆ ತಿನ್ನಬೇಕಾಗತ್ತೆ. ಈಗ ನನ್ನನ್ನ ಭಗವಂತನೇ ಕಾಪಾಡಬೇಕು ಅಂದುಕೊಂಡು ಅವನನ್ನ ಸ್ಮರಿಸಿಕೊಂಡರು:

''ಶ್ರೀಹರಿ! ಈಗ ನೀನೇ ನನಗೆ ದಿಕ್ಕು. ಇಲ್ಲಿ ಬಂದಿರೋದು ಹುಚ್ಚುನಾಯಿ ಅಲ್ಲದೇ ಇರಬಹುದು. ಅದಕ್ಕೆ ಸಂತಾನಹರಣ ಕ್ರಿಯೇನ್ನೂ ಆ ಪುಟ್ಟಲಕ್ಷಮ್ಮನ್ನ ಕಡೆಯಿಂದ ಮಾಡಿಸಿರಬಹುದು. ಆದರೆ ಅಷ್ಟಕ್ಕೇ ಅದು ಕಚ್ಚೊಲ್ಲ ಅನ್ನೋದು ಏನು ಗ್ಯಾರಂಟಿ? ನಾಯಿ ಕಚ್ಚಿದ್ರೆ ಎಷ್ಟು ಇಂಜೆಕ್ಷನ್ ತಗೋಬೇಕು, ಅದು ಎಷ್ಟು ಬಾಧೆ ಅನ್ನೋದು ನಿನಗೂ ಗೊತ್ತಿರೋ ವಿಷಯಾನೇ. ಹ್ಯಾಗಾದ್ರೂ ಮಾಡಿ ಈ ಸಂದಿಗ್ಧದಿಂದ ನನ್ನನ್ನ ಪಾರುಮಾಡು.... ಒಂದು ನಾಯೀನ್ನ ಓಡಿಸೋಕ್ಕೂ ನನ್ನನ್ನೇ ಕರೀತಿಯಲ್ಲ ಅಂತ ಕೋಪಿಸ್ಕೋಬೇಡ. ಆದ್ರೆ ಪರಿಸ್ಥಿತಿ ಹಾಗಿದೆ. ನೀನೇ ಬರಬೇಕು ಅಂತ ಏನಿಲ್ಲ. ನಿನ್ನ ಪರಿವಾರ ದೇವತೆಗಳಲ್ಲಿ ಯಾರನ್ನಾದ್ರೂ ಕಳಿಸಿದ್ರೂ ಆಗತ್ತೆ.... please...''

ಶಾಮರಾಯರ ಮೊರೆ ಶ್ರೀಹರಿಗೆ ಕೇಳಿಸಿರಬೇಕು ಅಂತ ಕಾಣತ್ತೆ. ಎರಡು ನಿಮಿಷ ಆಗೋಕ್ಕಿಲ್ಲ, ಇನ್ನೊಂದು ನಾಯಿ - ಹೆಣ್ಣು- ಕ್ಲಾಸೊಳಗೆ ಬಂದು ಒಂದು ಘಳಿಗೆ ಇದ್ದ ಹಾಗೆ ಮಾಡಿ ಮತ್ತೆ ವಾಪಸ್ ಹೋಯಿತು.

ಇನ್ನು ಆ ನಾಯಿಗೆ ಟೀಚರನ್ನ ಅಥವಾ ದೇವರಾಜನ್ನ ಕಟ್ಟಿಕೊಂಡು ಏನಾಗಬೇಕು? ಆ ಹೆಣ್ಣುನಾಯೀನ ಹಿಂಬಾಲಿಸಿಕೊಂಡು ಅಲ್ಲಿಂದ ಓಡಿತು.



''ನಿಮ್ಮ ನಾಯಿ ಇನ್ನು ಸ್ವಲ್ಪ ದೊಡ್ಡದಾಗಿರುತ್ತೆ ಅಂದ್ಕೊಡ್ಡಿದ್ವಿ, ಮಿ. ಬಾಸ್ಕರ್‌ವಿಲ್!''

# ಆಮದು ಸಂತೋಷ

– ಎಂ.ಎಸ್. ನರಸಿಂಹಮೂರ್ತಿ

ಹೊಸ ವರುಷಕ್ಕೆ ಏನಾದರೂ ಹೊಸ ವಸ್ತುಗಳನ್ನು ಖರೀದಿಸುವುದು ವಿಶಾಲೂಗೆ ಅಭ್ಯಾಸ. ವರ್ಷದ ಮೊದಲದಿನ ಮನೆಗೆ ಹೊಸ ಹುರುಪು ಬರುವುದು ಇಂಥ ವಸ್ತುಗಳಿಂದ.

''ರೀ, ಸಂಪೂರ್ಣವಾಗಿ ಬಂಗಾರದ ಜರಿ ಇರುವ ಹೊಸ ಸೀರೆ ಬಿಡುಗಡೆ ಆಗಿದೆಯಂತೆ. ಈ ಜಾಹೀರಾತು ನೋಡಿ'' ಎಂದು ಪತ್ರಿಕೆಯನ್ನು ನೀಡಿದಳು. ವಿಶ್ವ ಓದಿದ. ಎದೆ ಧಡ್ ಎಂದಿತು. ಒಂದು ಸೀರೆಯ ಬೆಲೆ ಇಷ್ಟು ಇರಲು ಸಾಧ್ಯ ಎಂದು ಊಹಿಸುವುದೂ ಕಷ್ಟ. ಸ್ವಲ್ಪ ನೀರು ಕುಡಿದು ಚೇತರಿಸಿಕೊಂಡ.

''ನೋಡಿದ್ರಾ, ಜರಿ ಬಾರ್ಡರು ಎಷ್ಟು ಶೈನಿಂಗ್ ಇದೆ ಈ ಕಲರ್ ಚಿತ್ರದಲ್ಲಿ?'' ವಿಶಾಲೂ ಕೊಂಡಾಡಿದಳು.

''ಆದರೆ ಅದರ ಬೆಲೆ ಎರಡು ಲಕ್ಷ ಕಣೆ''

''ಆದರೆ ಏನಂತೆ?''

''ಈ ಬೆಲೆಗೆ ಒಂದು ಒಳ್ಳೆ ಕಾರು ಬರುತ್ತೆ''

''ಆದರೆ ಕಾರ್ನ ಉಡೋಕೆ ಆಗುತ್ತಾ? ಬಿಡೋಕೆ ಆಗುತ್ತೆ! ಸೀರೇನ ಬಿಡೋಕೆ ಆಗುತ್ತಾ? ತೊಡೋಕೆ ಆಗುತ್ತೆ'' ಎಂದು ಪ್ರಾಸಬದ್ಧವಾಗಿ ಮಾತಾಡಿದಳು.

''ಎರಡು ಲಕ್ಷ ಎಲ್ಲಿದೆ ನಮ್ಮ ಹತ್ರ?''

''ಮನೆ ಮೇಲೆ ಸಾಲ ಮಾಡಿದರಾಯ್ತು''

ಯಾವತ್ತೋ ಒಂದು ದಿನ ಉಡೋ ಸೀರೆಗೆ ಎರಡು ಲಕ್ಷ ದಂಡ ಅಲ್ಲವೇನೇ?

''ಆದರೆ ಜೀವನದಲ್ಲಿ ಒಂದು ಸಲವಾದರೂ ಅಂಥ ಸೀರೆ ಉಡದಿದ್ದ ಮೇಲೆ ನಾನು ಹೆಣ್ಣಾಗಿ ಏನು ಉಪಯೋಗ?'' ಎಂದು ದಬಾಯಿಸಿದಳು.

ಸೀರೆ ಗಲಾಟೆ ವಿಶ್ವನ ಮನೆಯಲ್ಲಿ ಆಗಾಗ ನಡೆಯುತ್ತಲೇ ಇರುತ್ತದೆ. ಯಾರಾದರೂ ಮದುವೆಗೆ ಕರೆಯಲು ಬಂದಾಗ ಈ ಗಲಾಟೆ ವಿಪರೀತವಾಗಿ ಮನೆಯಲ್ಲಿ ಲಾಠಿ, ಟಿಯರ್‌ಗ್ಯಾಸ್, ಕರ್ಫ್ಯೂ ಎಲ್ಲ ಕಾಣಿಸಿಕೊಳ್ಳುತ್ತದೆ.

ಮೋಹನನ ಮದುವೆಗೆ ಆಹ್ವಾನಪತ್ರಿಕೆ ಬಂತು. ಮನೆಗೇ ತಂದು ಕೊಟ್ಟರು. ಮೋಹನ ವಿಶ್ವನ ಆಪ್ತ ಗೆಳೆಯ.

''ಮೂರು ದಿನ ನೀವು ಛತ್ರದಲ್ಲೇ ಇದ್ದು ಓಡಾಡಬೇಕು. ನಮ್ಮ ಕಡೆ ಓಡಾಡೋ ಮುತ್ತೈದೆಯರೇ ಇಲ್ಲ'' ಎಂದು ಮೋಹನನ ತಾಯಿ ಹೇಳಿ ಹೋದರು. ಗಂಡು ಕಡೆ ಓಡಾಡುವ ಕೆಲಸ ಹೆಚ್ಚು ಇರುವುದಿಲ್ಲ, ನಿಜ, ಆದರೆ ನಮಗೆ ಪರಿಚಯ ಇರುವವರು ಬಂದಾಗ ನೋಡಿಕೊಳ್ಳಬೇಕಲ್ಲ?

''ರೀ, ಮೋಹನ್ ಮದುವೆಗೆ ಸೀರೆಗಳು ತಗೋಬೇಕಾಗುತ್ತೆ ನಾನು'' ಎಂದು ವಿಶಾಲೂ ಶುರು ಮಾಡಿದಳು.

''ಆರು ತಿಂಗಳ ಹಿಂದೆ ಆರು ಸೀರೆಗಳು ಕೊಡಿಸಿದ್ದೆ'' ಎಂದ ವಿಶ್ವ.

''ಅದು ಮೋಹನನ ತಂಗಿ ಮದುವೆಗೆ. ಅದೇ ಕುಟುಂಬದಲ್ಲಿ ನಡೀತಿರೋ ಇನ್ನೊಂದು ಮದುವೆ ಇದು. ಕಳೆದ ಸಲ ಉಟ್ಟಿದ್ದ ಸೀರೆಗಳನ್ನೇ ಉಡೋಕೆ ಆಗುತ್ತಾ?''

''ಎಷ್ಟು ಬೇಕಾಗುತ್ತೆ ಈ ಸಲ?''

''ಜಾಸ್ತಿ ಏನಿಲ್ಲ. ಹಿಂದಿನ ದಿನ ಬೆಳಿಗ್ಗೆ ದೇವರ ಸಮಾರಾಧನೆ. ಅದಕ್ಕೊಂದು ಸೀರೆ. ಸಂಜೆ ವರಪೂಜೆಗೆ ಒಂದು ಸೀರೆ. ಮದುವೆ ದಿನ ಕಾಶೀಯಾತ್ರೆಗೆ ಒಂದು, ಧಾರೆಗೆ, ನಾಗೋಲಿಗೆ ಒಂದೊಂದು. ಸಂಜೆಯ ರಿಸೆಪ್ಷನ್‌ಗೆ ಒಂದು ಭರ್ಜರಿ ಸೀರೆ. ಮಾರನೆಯ ದಿನ ಬೆಳಿಗ್ಗೆ ಸತ್ಯನಾರಾಯಣ ಪೂಜೆಗೆ ಒಂದು ಸಿಂಪಲ್ಲಾದ ಪ್ರಿಂಟೆಡ್ ಸಿಲ್ಕ್ ಸೀರೆ''.

ವಿಶ್ವ ಗಾಬರಿಯಾದ. ಮದುಮಗಳೇ ಇಷ್ಟು ಸೀರೆಗಳು ಉಡುವುದಿಲ್ಲ.

''ಅಲ್ಲವೇ ನಾನು ಕೇವಲ ಒಂದು ಪ್ಯಾಂಟು ಧರಿಸಿ ಬರ್ತೀನಿ. ಜೊತೆಗೆ ಒಂದು ಬಿಳೀ ಪಂಚೆ. ಆದರೆ ನಿನಗೆ ಏಳು ಬಣ್ಣಗಳಲ್ಲಿ ಏಳು ಸೀರೆಗಳು ಬೇಕಾ? ಈ ತಾರತಮ್ಯ ಸರಿಯಾ?'' ಎಂದ.

''ರೀ, ನೀವು ಉಡೋ ಬಿಳೀಪಂಚೆ ಸಾಮಾನ್ಯದ್ದಾ? ಬಿಳೀಬಣ್ಣದಲ್ಲಿ ಏಳು ಬಣ್ಣಗಳು ಇರುತ್ತೆ. ಅಲ್ಲದೆ, ನಿಮ್ಮ ಪಂಚೇಲಿ ಕೆಳ ಅಂಚಿಗೆ ಮತ್ತೂ ಒಂದು ಬಣ್ಣ ಇರುತ್ತೆ. ಅಲ್ಲಿಗೆ ಎಂಟು ಬಣ್ಣನ ನೀವು ಉಟ್ಟಂತೆ ಆಗಲಿಲ್ಲವೇ?'' ಎಂದು ದಬಾಯಿಸಿದಳು.

ಹೊಸ ವರ್ಷಕ್ಕೆ ವಿಶ್ವನಿಗೆ ಎರಡು ಸಾವಿರ ಬೋನಸ್ ಬಂದಿತ್ತು. ಎರಡು ಲಕ್ಷ ಕೇಳಿದ್ದ ಮಡದಿಯ ಕೈಗೆ ಆ ಎರಡು ಸಾವಿರವನ್ನು ಕೊಟ್ಟ.

''ನನ್ನ ಕೈಲಿ ಇಷ್ಟೇ ಆಗೋದು'' ಎಂದ.

''ಸರಿಬಿಡಿ, ಯುಗಾದಿಗೆ ಎರಡು ಲಕ್ಷದ ಸೀರೆ ಕೊಂಡರಾಯಿತು'' ಎಂದು ವಿಶಾಲೂ ಅರೆಮನಸ್ಸಿಂದ ಒಪ್ಪಿದಳು. ತಾನೇ ಅಂಗಡಿಗೆ ಹೋಗಿ ಬಂದಳು. ಎರಡು ನಿಮಿಷದಲ್ಲಿ ಎರಡು ಸಾವಿರ ನೀರಿನಂತೆ ಖರ್ಚಾಗಿತ್ತು.

''ರೀ, ಈ ಸಲದ ಹೊಸ ವರ್ಷಕ್ಕೆ ನಿಮಗೂ ಹೊಸ ಬಟ್ಟೆ. ನನಗೂ ಹೊಸ ಬಟ್ಟೆ'' ಎಂದು ಆನಂದಪಟ್ಟಳು.

''ಏನೇನು ತಂದಿದ್ದೀಯ, ತೋರಿಸು?'' ಎಂದ ವಿಶ್ವ.

''ನನಗೆ 1900 ರೂಪಾಯಿಯಲ್ಲಿ ಸಿಂಪಲ್ಲಾದ ಎರಡು ಸೀರೆಗಳು. ನೋಡಿ, ಚೆನ್ನಾಗಿದೆಯಾ?''



''ನನಗೆ?''

''100 ರೂಪಾಯಿನಲ್ಲಿ 2 ನೆಟ್ ಬನಿಯನ್‌ಗಳು''.

''ಹಾಂ! ನಂಗೆ ಬರೀ ನೆಟ್ ಬನಿಯನ್ನಾ?''

''ಹೌದು, ವಿ.ಆರ್.ಎಸ್. ತಗೊಂಡು ಹೇಗೂ ರಿಟೈರ್ ಆಗಿದ್ದೀರ, ಏನಿರುತ್ತೆ ನಿಮಗೆ ಕೆಲಸ? ಯಾವ ಆಫೀಸಿಗೆ ಹೋಗಿ ಯಾವ ಸಾಮ್ರಾಜ್ಯ ಕಟ್ಟಬೇಕು?''

''ಹಾಗಿದ್ರೆ ಈ ಎರಡು ನೆಟ್ ಬನಿಯನ್ ಯಾಕೆ?''

''ಮಹಡಿ ಮೇಲೆ ಕೂತು ಹಪ್ಪಳ, ಸಂಡಿಗೆಗೆ ಕಾವಲು ಇರೋವಾಗ ಅಕ್ಕಪಕ್ಕ ಮನೆಯವರು ನೋಡ್ತಾರಲ್ಲ? ಅದಕ್ಕೆ ತಂದೆ. ಎಷ್ಟು ಚೆನ್ನಾಗಿದೆಯಲ್ಲ ನೆಟ್ ಬನಿಯನ್? ಎಕ್ಸ್‌ಪೋರ್ಟ್ ಕ್ವಾಲಿಟಿಯಂತೆ ಕಣ್ರೀ'' ಎಂದು ವಿಶ್ವನ ಮುಖಕ್ಕೆ ಸಂತೋಷವನ್ನು ಇಂಪೋರ್ಟ್ ಮಾಡಿಸಿದಳು.

# ಪ್ರಶಸ್ತಿ ವಿಜೇತರು

– ನೀರಗುಂದ ಕೇಶವಮೂರ್ತಿರಾವ್

ನವಂಬರ್ - 1!

ಕನ್ನಡಿಗರ ಕೆಚ್ಚನ್ನು ಹುಚ್ಚೆಬ್ಬಿಸುವ ದಿನ! ವರ್ಷದ ಹನ್ನೊಂದು ತಿಂಗಳು ಮಲಗಿ ನಿದ್ರಿಸುವ ಕನ್ನಡಿಗರಲ್ಲಿ ಕನ್ನಡತನ ತುಂಬಲು ಎಚ್ಚರಿಸಲು ನವಂಬರ್ - 1 ಬರಲೇಬೇಕು!

ಇದ್ದಕ್ಕಿದ್ದಂತೆ ನಮ್ಮೂರಿನ (ಬಾಗೂರಿನ) 'ಎಚ್ಚೆತ್ತ ಖನ್ನಡಿಗರ ಸಂಗ'ದ ಕಾರ್ಯಕಾರಿ ಸಮಿತಿಯವರಿಗೂ ಎಚ್ಚರವಾಯ್ತು. ಸರ್ವಸದಸ್ಯರ ಸಭೆಯಲ್ಲಿ ಈ ಸಲದ ರಾಜ್ಯೋತ್ಸವವನ್ನು ಅದ್ದೂರಿಯಾಗಿ ನಡೆಸಬೇಕೆಂದು ಠರಾವು ಪಾಸ್ ಮಾಡಲಾಯ್ತು.

ಕಾರ್ಯಕ್ರಮದ ವಿಶೇಷ ನಮ್ಮೂರಿನಲ್ಲಿರುವ, ನಾನಾ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿರುವ / ಸಲ್ಲಿಸುತ್ತಿರುವ ಗಣ್ಯರಿಗೆ ಪ್ರಶಸ್ತಿ ಪ್ರದಾನ ಸಮಾರಂಭ ಪ್ರಶಸ್ತಿಗಾಗಿ ಅರ್ಹರಿಂದ ಅರ್ಜಿ ಕರೆದಾಗಲೀ ಅಥವಾ ಯಾರು ಬೇಕಾದರೂ ಸ್ವಯಂ ಅರ್ಜಿ ಸಲ್ಲಿಸಬಹುದೆಂದಾಗಲೀ ತೀರ್ಮಾನ ತೆಗೆದುಕೊಳ್ಳುವಂತಿಲ್ಲವಲ್ಲ. ಎಲ್ಲಾ ಸದಸ್ಯರಿಗೂ ಸಹ ತಮ್ಮವರಿಗೂ ಪ್ರಶಸ್ತಿ ನೀಡಲೇಬೇಕೆಂಬ ಒತ್ತಡ ತರುವ ಹಕ್ಕಿದೆಯಾದರೂ ಅದನ್ನು ಮಾತಿನಿಂದ ಯಾರೂ ತೋರಗೊಡಲಿಲ್ಲ. ಅಂತೂ ಇಂತೂ ಪ್ರಶಸ್ತಿ ಪಡೆಯುವವರ ಹೆಸರುಗಳು ಆಯ್ಕೆಯಾದುವು.

ಪ್ರಶಸ್ತಿ ಆಯ್ಕೆ ಸಮಿತಿಯಲ್ಲಿ ತೀರ್ಮಾನಿಸಿದಂತೆ ನಮ್ಮೂರಿನ (ಬಾಗೂರಿನ) ಗಣ್ಯರ ಬಗ್ಗೆ ಈಗಾಗಲೇ ಸಂದರ್ಭೋಚಿತವಾಗಿ ನಾಡಿಗೆ (ಊರಿನವರಿಗೆ) ಪರಿಚಯ ಮಾಡಿಕೊಟ್ಟಿರುವ ನನ್ನನ್ನೇ ಪ್ರಶಸ್ತಿ ವಿಜೇತರ ಕಿರು ಪರಿಚಯವಿರುವ ನೆನಪಿನ ಸಂಚಿಕೆಯ ಸಂಪಾದಕನನ್ನಾಗಿಯೂ ನೇಮಿಸಿತು. ಇದಲ್ಲದೇ ರಾಜ್ಯೋತ್ಸವ ಸಂದರ್ಭದಲ್ಲಿ ಮಾಮೂಲಾಗಿ ನಡೆಯುವ ಕಾರ್ಯಕ್ರಮದಲ್ಲಿ ಯಾವುದೇ ಬದಲಾವಣೆಯಾಗುವುದು ಸಾಧ್ಯವಿರಲಿಲ್ಲ. (ರಂಗು ರಂಗಿನ ಧ್ವಜ, ಸಿಂಗರಿಸಿದ ವೇದಿಕೆ, ಆರ್ಕೆಸ್ಟ್ರ, ವಿಜಯನಗರದ ಹೆಬ್ಬಾಗಿಲು, ಡೊಳ್ಳುಕುಣಿತ... ಇತ್ಯಾದಿ.)

ವಿಶೇಷ ರಾಜ್ಯೋತ್ಸವ ಪ್ರಶಸ್ತಿ ವಿಜೇತರನ್ನು ಆಯ್ಕೆ ಮಾಡುವಾಗ ತುಂಬಾ ಶ್ರಮ ಪಡಬೇಕಾಯ್ತು. ಜಾತಿವಾರು, ಶೇಕಡವಾರು, ಬೀದಿವಾರು... ಹೀಗೆ

ಕೊನೆಗೆ ''ಹಾಳೂರಿಗೆ (ಬಾಗೂರಿಗೆ) ಉಳಿದವನೇ...'' ಎನ್ನುವಂತೆ ಐವರು ಮಹನೀಯರನ್ನು ಆಯ್ಕೆ ಮಾಡಲಾಯ್ತು. ಸನ್ಮಾನಿತರಿಗೆ ಮಾ.ನ ('ಮಾ.' ಅಂದರೆ ಲಕ್ಷ್ಮಿ (ಹಣ), 'ನ' ಅಂದರೆ ಇಲ್ಲ) ಪತ್ರ, ಹಾರ (ಆಹಾರವಲ್ಲ) ಮತ್ತು ನವಂಬರ್ ಛಳಿಗಾಲವಾದ್ದರಿಂದ ನಮ್ಮೂರಿನಲ್ಲಿ ನೇಯ್ದು ಕಂಬಳಿಗಳು ಪ್ರಸಿದ್ಧವಾದ್ದರಿಂದ ಎಲ್ಲರಿಗೂ ಕಂಬಳಿಯನ್ನು ಹೊದಿಸಿ ಗೌರವಿಸುವುದು. ಇವೆಲ್ಲಕ್ಕಿಂತ ಮುಖ್ಯವಾಗಿ ಒಂದೇ ವೇದಿಕೆಯ ಮೇಲೆ ಪಂಚ ಪಾಂಡವರಂತೆ ಒಟ್ಟಿಗೆ ಕುಳಿತು ಪ್ರಶಸ್ತಿ ಸ್ವೀಕರಿಸುವ ದೃಶ್ಯ ಬಾಗೂರಿನ ಜನರ ಅದೃಷ್ಟ! (ಸನ್ಮಾನಿತರೆಲ್ಲ ತೀವಿದೊಡ್ಡೋಲಗದ ನಡುವೆ ತನ್ನಂ ಮಾದಲೊಳೋವಿ ನುಡಿಸದ ಕೋಪವೊಂದಾವಸಿಷ್ಠ ಮುನಿ ಯಾವುದಂಪೇಳ್ವಡದನಲ್ಲೆಂಬ'' ವಿಶ್ವಾಮಿತ್ರನ ಜಾತಿಗೆ ಸೇರಿದವರು)

ಪ್ರಶಸ್ತಿಗೆ ಪಾತ್ರರಾದ ಮಹನೀಯರುಗಳೆಂದರೆ - ಶಾಸನದ ಶ್ರೀ ರಂಗರಾಯರು (ಸಾಹಿತ್ಯ - ಸಂಶೋಧನೆ) ಬುರುಡೆ ಬಾಜೀರಾಯರು (ಭಾಷಣ - ಬುರುಡೆ ಹೊಡೆಯುವುದರಲ್ಲಿ ಪ್ರವೀಣರು), ಸಾಹಿತಿ ಸಿಂಗರಾಯ (ಪ್ರಸಿದ್ಧನಲ್ಲದ ಕವಿ), ಪತ್ತೇದಾರ ಪರಮಶಿವ ಮತ್ತು ಕುಸ್ತಿ ರಂಗಣ್ಣ, ಈ ಮಹನೀಯರೆಲ್ಲ ನಮ್ಮೂರಿನ ಜನರಿಗೆ ಚಿರಪರಿಚಿತರೆ! ಒಬ್ಬೊಬ್ಬರನ್ನು ಕುರಿತು ಹೇಳಹೊರಟರೆ ಅದೊಂದು ಬೃಹತ್ ಹೊತ್ತಗೆಯೇ ಆಗಬಹುದು. ಆದರೂ ನೆನಪಿನ ಸಂಚಿಕೆಗೆ ಅಡಕಗೊಳ್ಳುವಂತೆ ಮಾನ್ಯರ ಸಂಕ್ಷಿಪ್ತ ಪರಿಚಯವನ್ನು ಈ ಕೆಳಕಂಡಂತೆ ಮಾಡಿಕೊಡಲಾಗಿದೆ. (ಕಂಸದಲ್ಲಿ ( ) ಸೂಚಿಸಿದರುವುದು ಈಗಾಗಲೇ ಇವರನ್ನು ಕುರಿತಂತೆ ಪರಿಚಯಿಸಿದ ಪತ್ರಿಕೆಗಳ ಹೆಸರು. - ಲೇ)

1. **ಶಾಸನದ ಶ್ರೀ ರಂಗರಾಯರು:** ಶ್ರೀಯುತರು ಈಗಾಗಲೇ (ವೀರಭೂಮಿ) ತಮಗೆಲ್ಲ ಪರಿಚಯವಾಗಿದ್ದಾರೆ. ಸಂಶೋಧನೆಯ ಕ್ಷೇತ್ರದಲ್ಲಿ ಅವಿರತವಾಗಿ ದುಡಿದಿರುವ ಇವರ ಪಂಪಕವಿಯ ಮೇಲೆ ಹೊಸ ಬೆಳಕು (ಧ್ರುವ), ಕನ್ನಡ - ತೆಲುಗು ಏಕಭಾಷೆಯಾಗಬೇಕೆಂಬ ಕೂಗೆದ್ದಾಗ 'ಲಿಪಿ ಸುಧಾರಣೆ' ಬಗ್ಗೆ (ನಗೆ-ಹೊಗೆ) ಸಲಹೆ, ತಮ್ಮ ಆಜನ್ಮ ವೈರಿಯೆಂದೇ ತಿಳಿದಿರುವ ಬುರುಡೆ ಬಾಜೀರಾಯರು ಕುರಿತ 'ಅಭಯಾಗ್ರಫಿ' (ಕನ್ನಡಪ್ರಭ) ಮತ್ತು ನಾಡು ನುಡಿಯ ಕುರಿತ ತಮ್ಮ ಕಳ ಕಳಿಯ (ಅವಕಾಶ ವಾಣಿಯ) ಸಂದರ್ಶನ (ಕನ್ನಡಪ್ರಭ) ಮುಂತಾದ ಲೇಖನಗಳು ಇಂದಿಗೂ ಪ್ರಸ್ತುತ.

2. **ಬುರುಡೆ ಬಾಜೀರಾಯರು:** ನಮ್ಮೂರಿನ ಸಾರ್ವಜನಿಕ ಜನ ಜೀವನದಲ್ಲಿ ಬುರುಡೆ ಬಾಜೀರಾಯರು ಮೂಗು ತೂರಿಸದೇ ಇರುವ ವಿಷಯವೇ

ಇಲ್ಲವೆನ್ನಬಹುದು. ಬುರುಡೆ ಬಿಡುವುದರಲ್ಲಿ ಇವರನ್ನು ಸರಿಗಟ್ಟುವವರಾರು ಇಲ್ಲ. ಸದ್ಯದಲ್ಲೇ ಗಿನ್ನೀಸ್ ಪುಸ್ತಕದಲ್ಲಿ ಇರುವ ಸಾಧನೆ ಪ್ರಕಟಗೊಳ್ಳುವ ಪ್ರಸ್ತಾಪವಿದೆಯೆಂದು ಅವರೇ ಬುರುಡೆ ಬಿಡುತ್ತಿರುವುದರಿಂದ ನಂಬುವುದು ಬಿಡುವುದು ಬಾಗೂರಿನ ಜನರಿಗೆ ಸಂಬಂಧಪಟ್ಟದ್ದು.

(ಮ.ಮಾ.: ಶಾ.ಶ್ರೀ.ರಂ. ರಾಯರೂ ಬ.ಬಾ.ರವರು ಬಾಲ್ಯ ಸ್ನೇಹಿತರಾದರೂ ಪ್ರಾರಂಭದಲ್ಲಿದ್ದ ಗಳಸ್ಯ-ಕಂಠಸ್ಯ ಈಗ ಪ್ರಾಣಸ್ಯ - ಉರುಳಸ್ಯ ಎನ್ನುವ ಸ್ಥಿತಿಯಲ್ಲಿದೆ.)

3. **ಸಾಹಿತಿ ಸಿಂಗರಾಯರು:** 'ರಂಗನ ಮುಂದೆ ಸಿಂಗನೆ'? ತಮಗೆ ತಾವೇ ಒಮ್ಮೆ ಪ್ರಶ್ನಿಸಿಕೊಂಡದ್ದನ್ನು ಬಾಗೂರಿನ ಜನತೆ ಇನ್ನೂ ಮರೆತಿಲ್ಲ. 'ಎಚ್ಚೆತ್ತ ಖನ್ನಡಿಗರ ಸಂಗ' ತನ್ನ ಮೊದಲ ರಾಜ್ಯೋತ್ಸವದ ತರುಣ ಕವಿ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷರಿವರು. ಅಂದು ಅವರು ಓದಿದ 'ಕವಿ-ತೆಗಳು' ಎಷ್ಟೋ ವರ್ಷಗಳ ನಂತರ ಪ್ರಕಟಗೊಳ್ಳುವ (ಅಪರಂಜಿ) ಅದೃಷ್ಟಪಡೆಯಿತು. ಅಧ್ಯಕ್ಷ ಭಾಷಣ ಮಾಡುವಾಗ ಉಂಟಾದ ವಾದ - ವಿವಾದಗಳಿಂದ ಉದ್ರೇಕ ಪರಿಸ್ಥಿತಿ ಉಂಟಾದಾಗ ಪೋಲೀಸರು ಮಧ್ಯೆ ಪ್ರವೇಶಿಸ (ವಿನೋದ) ಬೇಕಾಯ್ತು. ಸದ್ಯ ಸಿಂಗರಾಯರು ಸದ್ದು ಗದ್ದಲವಿಲ್ಲದೆ, ಸರ್ಕಾರ ನೀಡುತ್ತಿರುವ ಮಾಸಾಶನ ಸ್ವೀಕರಿಸುತ್ತ ಇಳಿ ವಯಸ್ಸಿನಲ್ಲೂ ಕೈಲಾದ ಸಾಹಿತ್ಯ ಸೇವೆ ಸಲ್ಲಿಸುತ್ತಿದ್ದಾರೆ.

4. **ಪತ್ತೆದಾರ ಪರಮಶಿವ:** ಪೋಲೀಸ್ ಇಲಾಖೆಯಲ್ಲಿ ಸರ್ಕಾರಿ ಹುದ್ದೆ ದೊರೆಯದಿದ್ದಾಗ, ಖಾಸಗಿಯಾಗಿ 'ಪತ್ತೆ-ದಾರಿ' ಯನ್ನೆ ಕಸುಬು ಮಾಡಿಕೊಂಡಿರುವ 'ಪರಮಶಿವನ' ಪರಿಚಯ (ಕನ್ನಡಪ್ರಭ) ಯಾರಿಗಿಲ್ಲ. ಇವರು ತಮ್ಮ 'ತುಬ್ಬುಗಾರಿ'ಕೆಯಲ್ಲಿ ನೂರೆಂಟು ಸಾಹಸಗಳನ್ನು ಮಾಡಿದ್ದಾರೆ. ಶ್ರೀಯುತರು ಮತ್ತು ಕುಸ್ತಿ ರಂಗಣ್ಣನವರು ಬಹಳ ಆಪ್ತರು ಒಮ್ಮೆ ರಂಗಣ್ಣನವರ ಮನೆಯ ಸಂಜೆ ಕೂಟದಲ್ಲಿ 'ಬೇಸ್ತು' (ನಗೆ-ಹೊಗೆ) ಬಿದ್ದ ಪ್ರಸಂಗ ಯಾರೂ ಮರೆಯುವಂತಿಲ್ಲ. ಇಳಿ ವಯಸ್ಸಾದರೂ ಸಂಜೆ ಹೊತ್ತು ನಮ್ಮೂರಿನ ಗರುಡಗಂಬದ ಕಟ್ಟೆಯ ಮೇಲೆ ಸಂಜೆಯ ಹೊತ್ತಿನಲ್ಲಿ ನಮ್ಮೂರಿನ ಅಳಿದುಳಿದ ಮಹನೀಯರುಗಳೊಂದಿಗೆ ತಮ್ಮ ಸಾಹಸದ ಪ್ರಸಂಗಗಳನ್ನು ಹಂಚಿಕೊಳ್ಳುವುದನ್ನು ಇಂದಿಗೂ ಕಾಣಬಹುದು.

5. **ಕುಸ್ತಿ ರಂಗಣ್ಣ:** ಪತ್ತೇದಾರ ಪರಮಶಿವನ ಆಪ್ತರು ನಾಡಿನಾದ್ಯಂತ ನಡೆಯುವ ಜಂಗಿ ಕುಸ್ತಿಗಳಲ್ಲಿ ಭಾಗವಹಿಸಿ ಅನೇಕ ಪ್ರಶಸ್ತಿ ಪಡೆದವರು.

ಆಗಾಗ್ಗೆ ಪತ್ತೇದರರ ಸಾಹಸದೊಂದಿಗೆ ತಮ್ಮ ಪಟ್ಟು ವರಸೆಗಳನ್ನು ಪ್ರದರ್ಶಿಸಿದ್ದು ಉಂಟು. ಪ್ರತಿ ವರ್ಷ ಮಾರ್ಚ್‌ನಲ್ಲಿ ನಮ್ಮೂರಿನಲ್ಲಿ ನಡೆಯುವ ಜಾತ್ರೆ ಸಂದರ್ಭದಲ್ಲಿ ರಾಜ್ಯ ಹೊರ ರಾಜ್ಯಗಳ ಕುಸ್ತಿ ಕವಿಗಳನ್ನು ಕರೆಸಿ ಅವರ ಪ್ರದರ್ಶನ ಏರ್ಪಡಿಸಿ, ಗೌರವಿಸುವ ಕಾರ್ಯಕ್ರಮ ಹಮ್ಮಿಕೊಳ್ಳುತ್ತಾರೆ. ಕುಸ್ತಿ ರಂಗಣ್ಣನವರ ಜೀವನದಲ್ಲಿ ಮರೆಯಲಾರದ್ದು. ನಮ್ಮೂರಿನ ಸಮೀಪದ ಮಧುರೆ ಗುಡ್ಡದಲ್ಲಿ ಮಾಡಿದ 'ಜೋಡಿಹುಲಿ ಶಿಕಾರಿ' (ನಗೆ-ಹೊಗೆ)ಯ ಅನುಭವ. ಈ ಇಳಿ ವಯಸ್ಸಿನಲ್ಲೂ ಕಾಚಾಕಟ್ಟಿ ಅಖಾಡಕ್ಕೆ ಇಳಿದರೆ ಎದುರಾಳಿಗಳು ಹಿಂದು ಮುಂದು ನೋಡುತ್ತಾರೆ.

ಈ ಮಹನೀಯರುಗಳೆಲ್ಲ ಬಾಗೂರಿನ ಜನರಿಗೆ ಪೂಜ್ಯರು. 'ಪಂಪ'ನ ಮಾತನ್ನೇ ತಿರುಗಿಸಿ ಹೇಳುವುದಾದರೆ

ಶಾಸನ ಸಾಹಿತ್ಯದೊಳ್ ಶ್ರೀರಂಗರಾಯಂ

ಬುರುಡೆ ಭಾಷಣ ಬಿಗಿಯುವುದರೋಲ್ ಬಾಜೀರಾಯಂ।

ಶರ, ಕುಸುಮ, ಭೋಗ, ಭಾಮಿನಿ, ರಗಳೆ ಕವಿತಾ ರಚನೆಯೋಳ್ ಸಿಂಗರಾಯಂ

ತುಬ್ಬುಗಾರಿಕೆಯೊಳ್ ಪತ್ತೇದಾರ ಪರಮಶಿವಂ

ಮತ್ತಾ ಗರಡಿ ವಿದ್ಯೆಯೋಳ್ ಕುಸ್ತಿರಂಗಣ್ಣಂ ಇರ್ಗಳಿನೀ

ಬಾಗೂರುಂ ಲೋಕಪೂಜ್ಯಂ॥

**ಶ್ರೀಮತಿ**

ನಮ್ಮ ಶ್ರೀ
ಪತಿಗೆ
ಎಳ್ಳಷ್ಟೂ ಇಲ್ಲ
ಮತಿ
ಅದಕ್ಕೇ ತಂದದ್ದು
ಅವನಿಗೊಂದು ಶ್ರೀ
ಮತಿ

– ಮರು ಬಿರಾದಾರ

# ಅಪರಂಜಿ ಹದಿನೆಂಟರ ಹಬ್ಬ




( ಎಡದಿಂದ ಬಲಕ್ಕೆ) ಶ್ರೀಮತಿ ಟಿ. ಸುನಂದಮ್ಮ, ಶ್ರೀ ಅ. ರಾ. ಸೇ., ಶ್ರೀ ಹಾ.ರಾ., ಶ್ರೀ ಎಸ್. ಎನ್. ಶಿವಸ್ವಾಮಿ ಮತ್ತು ಶ್ರೀ ಹಾರ್ನಳ್ಳಿ ರಾಮಸ್ವಾಮಿ



( ಎಡದಿಂದ ಬಲಕ್ಕೆ) ಸರ್ವಶ್ರೀ ಎಸ್. ಬಿ. ವೈದ್ಯ, ಕಮಲಾ ರಾಮಸ್ವಾಮಿ, ಅ. ರಾ. ಮಿತ್ರ, (ಹಿಂದೆ, ಕೃಷ್ಣಸುಬ್ಬರಾವ್ ) ಅಪರಂಜಿ ಶಿವು, ಎಸ್. ರಾಮಾನುಜ, ಹಾರ್ನಳ್ಳಿ ರಾಮಸ್ವಾಮಿ ಮತ್ತು ಬೇಲೂರು ರಾಮಮೂರ್ತಿ

# ರಾಜಕುಮಾರಿ ಮತ್ತು ತಗಡಿನ ಡಬ್ಬಿ

ಮೂಲ ಕಥೆ: ಥರ್ಬರ್
ಸ್ಕ್ರಿಪ್ಟ್ ಮತ್ತು ವಿಷುಯಲ್ಸ್: ಶಿವು

ಒಂದೂರಲ್ಲಿ ಒಬ್ಬ ರಾಜ. ಯಥಾಪ್ರಕಾರ ರಾಜಕುಮಾರಿ ಅಪ್ರತಿಮ ಸುಂದರಿ (ಅಲ್ವೇ ಮತ್ತೆ). ಗರ್ವ ಜಾಸ್ತಿ ಬೇರೆ ಅವಳಿಗೆ. ಅವಳ ಅಣ್ಣನ ಮದುವೇಲಿ ಮದುವಣಗಿತ್ತಿ ಮೇಲೆ ಎಲ್ರೂ ಅಕ್ಷತೆ ಎರಚಿದ್ರೆ, ಇವ್ಳು ಮುತ್ತುಗಳನ್ನೇ ಎರಚಿದ್ಳಂತೆ.



ರಾಜಕುಮಾರಿಗೆ ಹದಿನೆಂಟಾಯ್ತು. ಸ್ವಯಂವರ ಏರ್ಪಾಡಿಸಿ, ರಾಜ ಜನರಿಗೆ ಸುದ್ದಿ ತಿಳಿಸ್ದ. ಸ್ವಯಂವರದಲ್ಲಿ ಬೇರೆ ಬೇರೆ ರಾಜಕುಮಾರರಿಗೆ ರಾಜೋದ್ಯಾನದ ಬೇರೆ ಬೇರೆ ಭಾಗಗಳಲ್ಲಿ ಭೇಟಿ ಏರ್ಪಾಡಿಸಿದ್ದ ಕಿಲಾಡಿ ರಾಜ.






ಸುದ್ದಿ ಕೇಳಿ ವಾಯುವ್ಯದೇಶದ ಒಬ್ಬ ರಾಜಕುಮಾರ ಥಳಥಳ ಹೊಳೆಯೋ ಕಂದು ಕುದುರೆ ಏರಿ ಬಂದ



ಆಮೇಲೆ ಈಶಾನ್ಯ ದೇಶದಿಂದ ಇನ್ನೊಬ್ಬ ರಾಜಕುಮಾರ ಐರಾವತದಂತಹ ಮಹಾಗಜ ಒಂದರಮೇಲೆ ಬಂದಿಳಿದ.











ಗ್ನೇಯ ದೇಶದ ರಾಜಕುಮಾರ ರಿಬಂದ ಕುದುರೆ ಒಳ್ಳೇ ಅರಬ್ಬೀ ಕರೀ ದುರೆ. ಅವನ ಕೈಯಲ್ಲಿ ಒಂದು ಚಿನ್ನದ ಡವೆ ಪೆಟ್ಟಿಗೆ ಇತ್ತು. ಅವನೇನೂ ಹೆಚ್ಚು ಮಾತುಗಾರ ಆಗಿರಲಿಲ್ಲ.











ಪಾಪ, ನೈರುತ್ಯದೇಶದ ರಾಜಕುಮಾರ ಬಡವ. ಭಯೋತ್ಪಾದಕರಿಗೆ ಪ್ರೊಟೆಕ್ಷನ್ ಮನಿ ಕೊಟ್ಟೂ ಕೊಟ್ಟೂ ಅವನ ಬೊಕ್ಕಸ ಬರಿದಾಗಿತ್ತು. ಯಾವ್ದೋ ಹಳೇ ಕಾರಿನಲ್ಲಿ ಅವನು ಬಂದಿಳಿದ. ಅವನ ಕೈಯಲ್ಲಿ ಒಂದು ತಗಡಿನ ಡಬ್ಬಿ.












ರಾಜನ ಆಸ್ಥಾನದಲ್ಲಿ ಎಲ್ಲ ಸೇರಿದರು. ಎಲ್ಲಾ ಕೂತಿದ್ದಾಗ ರಾಜ ಕೇಳ್ದ.
ಏನಮ್ಮಾ, ಯಾರ್ನ ವರಿಸ್ತೀಯಾ


ಅಪ್ಪಾ, ನನ್ನ ಮದುವೆ ಅಂದ್ರೆ ಕೇಳ್ಬೇಕೆ. ಸುತ್ತಮುತ್ತಲಿನ ರಾಜರೆಲ್ಲಾ ಬರ್ತಾರೆ. ಒಡವೆ, ಆಭರಣಗಳ ಸುರಿಮಳೇನೇ ಆಗುತ್ತೆ. ಅವನ್ನೆಲ್ಲಾ ಜೋಪಾನಮಾಡೊಕ್ಕೆ ಈ ರತ್ನಖಚಿತ ಚಿನ್ನದ ಒಡವೆ ಪೆಟ್ಟಿಗೆ ತುಂಬಾ ಚಿನ್ನ. ಅವನೇ ನನ್ನ ಬಾಳಸಂಗಾತಿ.


ಮಂಗಳ ಮಸಗಿತು ಅರಮನೆಗೆ. ಊರು ಸಿಂಗರವಾಯ್ತು. ರಾಜಕುಮಾರಿ ರಾಜಕುಮಾರನನ್ನು ವರಿಸಿ ಅವನ ಪ್ರಾಣ ಹಿಂಡಲು ಪ್ರಾರಂಭಿಸಿದಳು. ರಾಜಕುಮಾರ ಮೇಲ್ನೋಟಕ್ಕೆ ಹೆಂಡ್ತಿ ತಾಳಕ್ಕೆ ಕುಣೀತಾ, ಒಳಗೊಳಗೇ ಭಗವದ್ಗೀತೆ ಓದಿಕೊಂಡು ಜೀವನ ಸಾರ್ಥಕ್ಯ ಪಡೆದಾ ಅಂತ ಪ್ರತೀತಿ.
ನೀತಿ:
ರಾಜಕುಮಾರಿ ತಗಡಿನ ಡಬ್ಬಿ ಆಸಾಮೀನೇ ವರಿಸ್ತಾಳೆ ಅಂದ್ಕೊಂಡೋರೆಲ್ಲಾ ಮುತ್ತು, ರತ್ನಖಚಿತ ಚಿನ್ನದ ಪೆಟ್ಟಿಗೆಗಿಂತ ನನಗೆ ತಗಡಿನ ಡಬ್ಬೀನೇ ಇಷ್ಟ ಅಂತ ನೂರು ಬಾರಿ ಬರೀರಿ.

# Re-exam ನ ಅನುವಂಶಿಕತೆ

- ಶ್ಯಾಮಲ ರವಿಶಂಕರ್



ನೀವ್ಯಾವಾಗ್ಲಾದ್ರೂ, Re-exam ಬರೆದಿದ್ದೀರಾ ನಿಮ್ಮ ಜೀವನದಲ್ಲಿ? ಆಂ, ಏನಂದ್ರಿ? 'ಅದೊಂದು ಗ್ರ್ರಾಚಾರ ಬಿಟ್ಟು ಇನ್ನೆಲ್ಲಾ ಗ್ರ್ರಾಚಾರಗಳೂ ನನ್ನ ಬೆನ್ನಟ್ಟಿದ್ವು ನನ್ನ student life ನಲ್ಲಿ, ಅದೊಂದು ಪೀಡೆ ನನ್ನನ್ನ ಕಾಡಲಿಲ್ಲ' ಅಂದ್ರಾ? ಅದ್ಯಾಕಪ್ಪಾ, ಅಷ್ಟು ನಿಕೃಷ್ಟ. ಅದರ ಬಗ್ಗೆ ನಿಮಗೆ? ನಾನು, ನಮ್ಮವರು ಕಡೆಗೆ ನನ್ನ ಇಬ್ಬರು ಮಕ್ಳೂ ಅದನ್ನ ಎದುರಿಸಿದ್ದೀವಿ. ನನಗೆ ಮಾತ್ರ ಅದೊಂದು ಮಜಾ, ಸಖತ್ ತಮಾಷೆ ಅನ್ಸತ್ತೆ ಗೊತ್ತಾ! ಇದೇನು ತಲೆ ಸರಿಯಾಗಿರೋವ್ರು ಯಾರೂ ಹೀಗನ್ನೊಲ್ಲಾ ಅಂತಿದ್ದೀರಾ? ತಲೆ - ಅಂದ್ರೆ ನನ್ನ ತಲೆ - ನನಗೆ ವಿಪರೀತವಾಗಿ ನೋವು ಆಗಾಗ ಕೊಟ್ರೂ - ಮೋಸವೇನೂ ಇಲ್ಲಾರೀ (at least, ಹಾಗೆ ನಾನಂತೂ ನನ್ನ ಬಗ್ಗೆ ಅಂದ್ಕೊಂಡಿದ್ದೀನಿ) ಮಾತು ಎಲ್ಲಿಗೋ ಹೋಯ್ತು. Back to re-exam please. ಏನೂ ಮತ್ತೆ ಯಾರು ಓದೋವ್ರು, ಓದಿರೋದ್ದನ್ನೇ, ಅಂದ್ರಾ? ಬೇಜಾರಾ? ಯಾರಿಗೆ? ಓದೋಂಥಾವ್ರಿಗೆ ಮಾತ್ರ. ಅಷ್ಟೇರಿ. ಒಂದು ಸಲ ಏನೋ ಒಂದಷ್ಟು ಹೆಚ್ಚು ಆಯಾಸ ಪಟ್ಕೊಳ್ದೇ ಓದಿ ಮುಗ್ಸಿದ ಶಾಸ್ತ್ರ ಮಾಡೋಕೇ ಮೈ

ಬಗ್ಗೆದ ನನ್ನಂಥವ್ರಿಗೆ, ಇನ್ನೆಷ್ಟು ಸಲ ಆದ್ರೂ, ೧-ಅಲ್ಲದಿದ್ರೆ ೧-೧-ಎಕ್ಸಾಮ್ ಮಾಡಲಿ ಬಿಡಿ ಸರಕಾರ. ನನಗೇನೂ ಅಭ್ಯಂತರವಿಲ್ಲ. ನನ್ನ ದೃಷ್ಟೀಲಿ ಅದೂ ಒಂಥರ time pass.

ಅದೇ, ಆಗ್ಲೇ ಹೇಳಿದ್ನಲ್ಲಾ ಹಾಗೆ ನನ್ನ ಸಂಸಾರಕ್ಕೂ re-examಗೂ ಒಂಥರ ನಂಟಸ್ತಿಕೆ. ಋಣಾನುಬಂಧ. ನಮ್ಮ ನಾಲ್ಕೂ ಜನಕ್ಕೆ ನಿಷ್ಪಕ್ಷ ಪಾತಿಯಾಗಿ ಅದು ತನ್ನ ರುಚಿಯನ್ನು ತೋರಿಸಿದೆ. 'ಇದೇನಪ್ಪಾ? ಇದೂ ಒಂದು ಅನುವಂಶಿಕ ಜಾಡ್ಯವೇ' ಅಂದಿರಾ? ಅಲ್ಲಾ ಒಂದು ಜಾಡ್ಯ ಅನ್ನೋದಕ್ಕೆ physiological ಅಥವಾ Patho-logical ಕಾರಣ ಇರಬೇಕಲ್ವಾ, ಇದು ಹಾಗಲ್ಲ ಒಂದು ವಿಧವಾದ environmental ಕಾರಣ ಇದ್ದಿರಬೇಕು, ಎಂದು ನನ್ನ ಸಂಶಯ. ಯಾವುದೋ Pollutant/s ನಿಂದ ಹಾಗಾಗುತ್ತೆ ಅಂತ ನನಗೆ ಗುಮಾನಿ. ಜೊತೆಗೆ ನಮ್ಮ ಪರಿಸರ ಒಂಥರ ಅಲ್ಲ ಒಂಥರ ಪಾತ್ರ- ಪರಿಣಾಮ ಬೀರುತ್ತೆ. ಅದನ್ನ ಮೌನವಾಗಿ ಎದುರಿಸಿ ಒಳಗೊಳಗೆ ಖುಷಿ(?) ಪಟ್ಟ ದಿನಗಳಿದ್ದವು ನಾನೇ ಎದುರಿಸಬೇಕಾದಾಗ!

ನಾನು ಹತ್ತನೇ ತರಗತಿಯ ಪರೀಕ್ಷೆ ಬರೆಯಲು ಸೆಂಟರ್‌ಗೆ ಹೋದಾಗ ಎಲ್ಲೆಲ್ಲೂ ಗುಸು - ಗುಸು ಪಿಸು ಮಾತು. ಏನೋ ಅಂದ್ಕೊಂಡ್ರೆ. ಪೇಪರ್ (ಪ್ರಶ್ನೆಪತ್ರಿಕೆ) out ಆಗಿದೆಯಂತೆ ಅಂತ! ಎಲ್ಲಾ ತಿರುಳಿಲ್ಲದ ಮಾತು ಅಂತ ಕೆಲವರು; ಮತ್ತೆ ಕೆಲವು ಎಲ್ಲಿ ಸಿಕ್ಕತ್ತೆ ಅಂತ ವಿಚಾರಿಸೋಕ್ಕೆ ಕೆಲವರು ಮುಂದಾದರೂ, ಪರೀಕ್ಷೆ ಮಾತ್ರ ನಡೆಯಿತು. ಎರಡನೇ ದಿನಾನೂ ಹಾಗೇ ಆಯ್ತು. ಮೂರು ನಾಲ್ಕು ದಿನಗಳಲ್ಲಿ ನನ್ನಂಥವಳ ಕಿವಿವರೆಗೂ ಬಿದ್ದ ಸಮಾಚಾರ ಏನಂದರೆ ಎಲ್ಲೋ ಸಂದಿ-ಗೊಂದಿಗಳಲ್ಲಿ ಬಿ.ವಿ.ಕೆ. ಅಯ್ಯಂಗಾರ್ ಅನ್ನೋ ರಸ್ತೆಯಲ್ಲಿ ರಾತ್ರಿ ೧೧ ಘಂಟೆ ಮೇರೆಗೆ (ಸದ್ಯ, ಅಮಾವಾಸ್ಯೆ ಆಗಿರಬೇಕು ಅನ್ನಲಿಲ್ಲ) ಹೋದ್ರೆ, ಎಡಕ್ಕೋ ಬಲಕ್ಕೋ ಎರಡನೆಯದೋ (ಮೂರನೇದೋ) ತಿರುವಿನಲ್ಲಿ ಒಂದು typist ಅಂಗಡಿಲಿ zero watt ದೀಪ ಉರೀತಿರತ್ತಂತೆ. ಅಲ್ಲಿ ಹಾಗೆ - ಹೀಗೇ ಠಳಾಯಿಸ್ತಾ ಇದ್ರೆ ಒಬ್ಬ ಕಪ್ಪಗೆ- ದಪ್ಪಕ್ಕೆ ಕುಳ್ಳಗೆ ಇರೋವ್ನು ಬಂದು ಅನುಮಾನಿಸ್ತಾ 'ಏನಾದ್ರೂ ಬೇಕಾ ನಿಮಗೆ' ಅಂತಾನಂತೆ ಆಂ... ಊಂ.. ಅಂದ್ರೆ ಸಾಕು, ಅವನು hint ತಗೊತಾನಂತೆ ಕೈಗೆ ಹಾಕೋದು ಹಾಕಿದ್ರೆ, ಅವನ್ನು ಶರ್ಟೊಳಗ್ನಿಂದ ಮುದುರಿದ ಒಂದು ಕಾಗದಾನ ಕೊಡ್ತಾನಂತೆ. ಹೀಗೆ - ಹಾಗೆ ಅಂತ ಅಂತೆ-ಕಂತೆಗಳು ಹೆಮ್ಮರವಾಗಿ ಹಬ್ಬಿದ್ದವು. ಆದ್ರೂ ನೋಡಿ, ಸಭ್ಯಸ್ತರೇ ಪ್ರಪಂಚದಲ್ಲಿ ಹೆಚ್ಚಲ್ವಾ, ತೊಂಭತ್ತೊಂಬತ್ತು ಪರ್ಸೆಂಟ್ ಜನ ಅದನ್ನ ನಂಬದೇ ತಮ್ಮ ಪಾಡಿಗೆ ತಾವು ಪರೀಕ್ಷೆಗೆ ಅಣಿವಾಗುತ್ತಿದ್ದುದುಂಟು. ಅದೇ ನೋಡಿ, ಆ ಇನ್ನೊಂದು ಪರ್ಸೆಂಟ್ ಇದ್ಯಲ್ಲಾ, ಅದು ಘೂಟಿಯಾಗಿ ತಾನು ಮಾಡಬೇಕಾದ್ದನ್ನು ಮಾಡಿ ನಿರಾತಂಕವಾಗಿ ಉಸಿರಾಡುತ್ತಿತ್ತು! ನಾನು ಮಾತ್ರ inertia ದಿಂದ ಎಷ್ಟಾದರೂ ಹೊರಬೀಳಲಾರದಂಥವಳು. ಅವೆಲ್ಲಾ ಬರೀ rumours ಅಂತ

(ಅನ್ನೊಳ್ಳೋದ್ರಲ್ಲಿ ಎಂಥಾ ಸುಖ!) ಸೆಂಟರ್‌ಗೆ ಒಂದ್ಹತ್ತು ನಿಮಿಷ ಮುಂಚೇನೇ ಹೋಗೋದು. ಬೆಲ್ ಆದಾಗ ಒಳಗೆ ಹೋಗಿ ತೋಚಿದ್ದನ್ನ ಬರೆದು ಬರೋದು ಮಾಡ್ತಿದ್ದೆ. Time management ಅನ್ನೋದು ನನ್ನ ತಲೇವರೆಗೂ ಬಂದಿರಲಿಲ್ಲ. ಆದ್ದರಿಂದ, ಕಡೇವರ್ಗ್ಗೂ ಕೂತಿದ್ರೂ, ಬರೀತಿದ್ರೂ, ಪ್ರಶ್ನೆ ಪತ್ರಿಕೆಗೆ ಪೂರ್ತಿಯಾಗಿ ಉತ್ತರ ಬರೀದೆ, ಮುಗಿಸದೇ ಹೊರ ಬರ್ತಿದ್ದೆ. ಅದಕ್ಕಾಗಿ ಹೆಚ್ಚಾಗಿ ಪಶ್ಚಾತ್ತಾಪ ಪಟ್ಟವಳೂ ಅಲ್ಲ. ಹೀಗೇ ನಡೀತಿತ್ತು ನಮ್ಮ ಪರೀಕ್ಷೆ. ಅಂದು ಬೆಳಗ್ಗೆ ಡೆಕ್ಕನ್ ಹೆರಾಲ್ಡ್‌ನಲ್ಲಿ ನಮಗೆ ಕೊಡಬೇಕಾದ ಪ್ರಶ್ನೆಪತ್ರಿಕೆ ಮುದ್ರಿಸಲ್ಪಟ್ಟಿತ್ತು! ಅದೂ general maths! ಆದರೂ ಸರಕಾರದಿಂದ ಪರೀಕ್ಷೆ ರದ್ದಾಗಿದೆ ಎಂಬ ಸುದ್ದಿ ಹೊರಬಿದ್ದಿರಲಿಲ್ಲ! ನಾವೆಲ್ಲರೂ ಸೆಂಟರಿಗೆ ಹೋದ ಮೇಲೆ ಅದು ರದ್ದಾಗಿದ್ದ ಸುದ್ದಿ ಹೊರಬಿತ್ತು. ಎಲ್ಲ ಪೇಪರ್‌ಗಳೂ ಕ್ಯಾನ್ಸಲ್ ಆಗಿದ್ದವು. ರಿ-ಎಕ್ಸಾಮ್‌ನ ತಾರೀಕನ್ನು ಅನಂತರ ತಿಳಿಸಲಾಗುವುದು ಎಂದಿತ್ತು. ಇದನ್ನು ಕೇಳಿ ಯಾರ್‍ಯಾರಿಗೆ ಏನೇನು ಅನ್ನಿಸ್ತೋ ನನಗೆ ಗೊತ್ತಿಲ್ಲ. ನನಗೆ ಮಾತ್ರ ಏನೂ ಅನ್ನಿಸಲಿಲ್ಲ. ಸೀದಾ ಮನೆಗೆ ಬಂದು ಗಡದ್ದಾಗಿ ನಿದ್ದೆ ಹೊಡೆದೆ. ನಮ್ಮ ಬಳಗವೆಲ್ಲ ಮಲ್ಲೇಶ್ವರದಿಂದ ಹಿಡಿದು ಅಬ್ಬಾ ಅಂದ್ರೆ ಜಯನಗರದವರೆಗೇ ಹರಡಿರುವುದರಿಂದ, ಬೇರೆ ಊರಿಗೆ ಬೇಸಿಗೆ ರಜಕ್ಕಾಗಿ ಹೋಗುವ ಬವಣೆಯೂ ಇರಲಿಲ್ಲ. ಇನ್ನೂ L.T.C. ಥರ ವ್ಯವಸ್ಥೆಗಳ ಕಾಲವಲ್ಲ ಅದು. ಹಾಗಾಗಿ, ಹೇಗೂ ಮನೇಲೇ ತಾನೆ ಠಿಕಾಣಿ. ಆದ್ರೆ ಆ ವರ್ಷ ಮಾತ್ರ ನಮ್ಮ ಮನೆಯಲ್ಲಿ ಯಾತ್ರಾರ್ಥಿಗಳಾಗಿ ಹಾಗೂ ಸುತ್ತಲಿನ ಪ್ರೇಕ್ಷಣೀಯ ಸ್ಥಳಗಳನ್ನ ನೋಡಿಬರುವ ಪ್ಲಾನ್ ಹಾಕಿದ್ದರು, 'ನೀನು... ಹೇಗೆ, ಹೀಗಾದ್ರೆ...' ಅಂದ್ರು ಎಲ್ರೂ ಆತಂಕದಿಂದ. 'ನಾನು ಅಜ್ಜೀ - ತಾತನ ಜೊತೆ ಇರ್ತೀನಿ ನೀವೆಲ್ಲ ಹೋಗಿಬನ್ನಿ ಅಂತ ಕಳಿಸಿಕೊಟ್ಟೆ! ನಾನು ಮಾತ್ರ ಹಾಯಾಗಿ ಉಂಡಾಡಿಯಾಗಿ ಅಜ್ಜಿ ಮಾಡಿದ್ದನ್ನು ತಿಂದ್ಕೊಂಡು ತಾತನ ತಮಾಷೆಗಳನ್ನು ಕೇಳಿಕೊಂಡು ಹಾಯಾಗಿ ಇದ್ದೆ. ನನ್ನನ್ನು ನೋಡಿದ ನಮ್ಮ ಹೆಡ್‌ಮೇಡಮ್ (ನಮ್ಮ ನೆರೆಮನೆಯಲ್ಲೇ ಇದ್ದದ್ದರಿಂದ) ''ಏನಮ್ಮಾ, ಹೇಗೆ ನಡೀತಾ ಇದೆ, ನಿನ್ನ preparations?" ಅಂತ ವಿಚಾರಿಸಿದ್ರು ಒಂದು ದಿನ. 'ಆಯ್ತಲ್ಲ ಮೇಡಂ ಓದಿದ್ದೂ ಮತ್ತು ಬರೆದಿದ್ದೂನೂ, ಇನ್ನೂ ಎಷ್ಟು ಸಲ ಅಂತ ಓದಲಿ?' ಅಂದೆ. ಅವರಿಗೆ ಅವರ ಶಿಷ್ಯಳ ದೃಢ ನಿರ್ಧಾರ ಕಂಡು ಏನನ್ನಿಸ್ತೋ, ಇನ್ನೆಂದೂ ಅವರು ನನ್ನ ಗೋಜಿಗೇ ಬರಲಿಲ್ಲ!

ಅದೇ ನೋಡಿ, ನಮ್ಮ ಬಳಗನ handle ಮಾಡೋದು ಅಷ್ಟು ಸುಲಭವಾಗಿರಲಿಲ್ಲ. ನನ್ನನ್ನ ನೋಡಿದ ಕೂಡಲೇ ಒಂಥರಾ ಸಂತಾಪ ಸೂಚಕರ ರೀತೀಲಿ, ''ಏನೇ... ಕೇಳಿದೆ, ವಿಷ್ಯಾನಾ ರಿ-ಎಕ್ಸಾಂ ಅಂತೆಲ್ಲೇ ಛೇ... ಛೇ.. ತ್ಚು... ತ್ಚು ಹೀಗಂತೂ ಆಗ್ಬಾರ್ದಾಗಿತ್ತು. ಏನೋ ನಿಮ್ಮ ನಿಮ್ಮ ಕರ್ಮ, ಅನುಭವಿಸದೇ ಇದ್ರೆ ಬಿಡತ್ತಾ?'' ಅಂತ ಅನ್ನೋವ್ರು. ಇದ್ಯಾಕೆ ಇವರು ಹೀಗಾಡ್ತಾರೆ ಅಂತನ್ನಿಸ್ತಿತ್ತು ನನಗೆ. ಇಷ್ಟಕ್ಕೂ ಏನವಸರ, ಇವತ್ತಲ್ಲ ನಾಳೆ ಪುನಃ ಪರೀಕ್ಷೆ ನಡೆಸಲೇಬೇಕು, ಫಲಿತಾಂಶ

ಹೊರಬೀಳಬೇಕು. ಇಲ್ಲಾದ್ರೆ ಬರೋ ವರ್ಷ PUC ಓದೋವ್ರು ಯಾರಿರ್ತಾರೆ, ನಾವಲ್ಲದೆ ಅನ್ನೋ ತರ್ಕ ಮನಸ್ಸಿನಲ್ಲಿ. ಈ ಮಧ್ಯೆ ಮದುವೆಗಳು, ಮುಂಜಿಗಳು, ಅರವತ್ತು ವರ್ಷದ ಶಾಂತಿ, ಚೌಲ, ಶ್ರೀಮಂತ, ನಾಮಕರಣ, ವೈಕುಂಠ ಏನೆಲ್ಲಾ ಸಮಾರಂಭಗಳಿಗೆ ಅಜ್ಜಿ-ತಾತ ಹೋಗೋವ್ರೋ ಎಲ್ಲಕ್ಕೂ ನಾನು ಬಾಲಂಗೋಚಿ ಹಾಗೆ ಹೋಗಿ ಮೂಗಿನತನಕ ಊಟ ಹೊಡೆದು ನಿದ್ದೆಗೆ ರೆಡಿಯಾಗಿ ಮನೆಗೆ ಬರ್ತಿದ್ದೆ! ಆದ್ರೆ ನನ್ನ ಬಳಗ ಮಾತ್ರ ನನ್ನ ಬಗ್ಗೆ ಕಾಳಜಿ ವಹಿಸ್ತಿತ್ತು. ''ಪಾಪಾ, ನೋಡ್ರೇ ಅವಳ್ನ, ಹೇಗಾಗ್ಬಿಟ್ಟಿದ್ದಾಳೆ, ಏನು ಸೀರಿಸ್ಸಾಗ್ಬಿಟ್ಟಿದ್ದಾಳೆ ನೋಡ್ರೇ, ಪಾಪಾ. ಈ ಸರಕಾರಕ್ಕೊಂದಿಷ್ಟು... ಎಷ್ಟು ಮಕ್ಕಳ್ನ ಉಸ್ ಅನ್ನಿಸ್ತೋ ಏನೋ'' ಅಂತ ಕಳಕಳಿ ಪಡ್ತಿದ್ರು. ಇವೆಲ್ಲ ಒಂಥರಾ ಮಜಾ ಕೊಡ್ತಿತ್ತು ನನಗೆ. ಯಾವ ಬಾಯಲ್ಲಿ ಹೇಳ್ಲಿ ನಾನು ಹಾಯಾಗಿದ್ದೀನಿ ಅಂತ! ಅದಕ್ಕೆ ಆ ಗಾಂಭೀರ್ಯ! ಕಡೇಗೆ ಒಂದು ದಿನ ನನ್ನ ಒಬ್ಬ ಸೋದರಮಾವ ನಗನಗ್ತಾನೇ ಅವರಿಗೆಲ್ಲಾ ಒಂದು ಡೋಸ್ ಕೊಟ್ರು ನೋಡಿ ''ನೀವೆಲ್ಲಾ ಯಾಕೆ ಅವಳ ಮೇಲೆ ಇಷ್ಟು ಪ್ರೀತಿ ತೋರಿಸ್ತಾ ಇದೀರಾ? ನನಗೋ, ಅವಳ್ನ ನೋಡಿದ್ರೆ ಹೊಟ್ಟೆಕಿಚ್ಚು, ನಾವ್ಯಾರೂ ಮಾಡಲಾಗ್ದ ಕೆಲಸ ಅವಳು ಸಾಧಿಸಿದ್ದಾಳೆ ಅಂತ'' ಅಂದ್ರು. ತಕ್ಷಣ chorus ಏನೋ, ಪೇಪರ್ ಸಿಕ್ತಾ ಅವಳ್ಗೆ? ಓ ಅದಕ್ಕೇ ಹೀಗೆ ಮಂಕಾಗ್ಬಿಟ್ಟಿದ್ದಾಳೆ'' ಅಂತ ಇನ್ನೂ ಏನೇನೋ ಹೇಳೂದ್ರಲ್ಲಿದ್ರು. ''ಅಲ್ಲಾ, ಅಲ್ಲಾ, ಅವಳು ಒಂದು ಸಲ ಫೀಸು ಕೊಟ್ಟು ಎರಡು ಸಲ ಸ್ಟೇಷನರಿ ಖರ್ಚು ಮಾಡಿಸ್ತಿದ್ದಾಳೆ ಸರಕಾರಕ್ಕೆ'' ಅಂತ ನಮ್ಮ ಮಾವ ಎಲ್ಲರನ್ನೂ (ನನ್ನನ್ನೂ ಕೂಡ) ನಗ್ಸಿದ್ರು.

ನನ್ನ ದೊಡ್ಡ ಮಗಳಿಗೂ ಹತ್ತನೇ ತರಗತಿಯಲ್ಲಿ ಇದೇ ರೀತಿ ೪-೫ ಪೇಪರ್‌ಗಳು ಆದಮೇಲೆ ವಾರ್ತಾ ಪತ್ರಿಕೆಗಳಲ್ಲಿ ಆ ದಿನದ ಪೇಪರ್ ಮುದ್ರಣವಾದ ಮೇಲೆ ಪರೀಕ್ಷೆಗಳನ್ನ ರದ್ದು ಮಾಡಲಾಯಿತು. ವ್ಯತ್ಯಾಸ ಏನಪ್ಪಾ ಅಂದ್ರೆ ಈಗಿನ ಮಕ್ಕಳು ಓದನ್ನು ಬಹಳ ಸೀರಿಯಸ್ಸಾಗಿ ತಗೋತಾರೆ. ಒದ್ದಾಡ್ತಾ ಇದ್ದ ಮಗಳ್ನ ಕರೆದು, ನಾನು 'ಹೋಗ್ಲಿ ಬಿಡೆ. ನಿಂಗೊಬ್ಬಳಿಗೆ ಅಲ್ವಲ್ಲಾ ಇದು affect ಆಗಿರೋದು ನಾಕೂವರೆ ಲಕ್ಷ ಮಕ್ಕಳಲ್ಲಿ ನೀನೂ ಒಬ್ಳು ಅಂದ್ಕೋ. ಹಾಯಾಗಿರು, ಬೇಸಿಗೆ ರಜ ಕಡಿಮೆ ಮಾಡ್ಬಿಡಬಹುದು ಇಂತಹ ಪರಿಸ್ಥಿತೀಲಿ. ಈಗಲೇ ಎಂಜಾಯ್ ಮಾಡು' ಅಂತ ಸುಮ್ಮನಾಗಿಸಿದೆ. ಬಹಳ ಬೇಗನೇ ರಿ-ಎಕ್ಸಾಮ್ ಶುರು ಮಾಡಿದ್ದರಿಂದ ಜನರ ಬಾಯಿಗೆ ಜಾಸ್ತಿಯಾಗಿ ತುತ್ತಾಗಲಿಲ್ಲ.

ನಾನು ಹೇಳಿದೆನಲ್ಲಾ, ಇದು ನಮ್ಮ ಮನೆಗೆ ಆಗಿ ಬಂದದ್ದು ಅಂತ. ಅಂದ ಮೇಲೆ ನನ್ನ ಎರಡನೇ ಮಗಳಿಗೆ ಇದು ಆಗದಿದ್ರೆ ಹೇಗೆ? X ಆಯ್ತು, ಪಿ.ಯು.ಸೀನೂ ಆಯ್ತು. ರಿ-ಎಕ್ಸಾಂ ಮಾತೇ ಇಲ್ಲಾ ನನಗೆ ಯಾಕೋ ಸ್ವಲ್ಪ 'ಬಿಂ' ಅನ್ನಿಸ್ತಿತ್ತು. ಇದೂ ಒಂದು student life ಆ ಅಂತ, ಪುಣ್ಯಕ್ಕೆ ಅವಳಿಗೆ ನಾನು ಆ ವಿಷಯ ಹೇಳಲಿಲ್ಲ ಹೇಳಿದ್ದಿದ್ರೆ, ''ನೀನು ಏನೇನೋ ಹೇಳ್ಬಿಡ್ತೀಯಾ, ನಿನ್ನ ನಾಲಿಗೆ ಮೇಲೋ ಮಚ್ಚೇ

ಬೇರೆ ಇದೆ, ಅದು ನಿಜ ಆಗ್ಬಿಡತ್ತೆ, ನಿನಗೇನು, ಬರೆಯೋವ್ಳು ನಾನೇ ತಾನೆ'' ಅಂತ ಝಾಡಿಸ್ತಾಳೆ ಅನ್ನೋ ಭಯಕ್ಕೆ. ಎಲ್ಲಿ ಅದಕ್ಕೆಲ್ಲಾ ಅವಕಾಶ ಕೊಡದೆ ಅವಳ ಎಂಜಿನಿಯರಿಂಗ್ ಎಂಟ್ರೆನ್ಸ್ ಎಕ್ಸಾಮ್ ಕ್ಯಾನ್ಸಲ್ ಆಗ್ಹೋಗ್ಬೇಕಾ? ಮತ್ತೆ ಶುರು ಆಯ್ತು ಪುರಾಣ, ಯಾವಾಗ, ಏನು ಕಥೆ, ಹೇಗಾಯ್ತು, enquring/inquring ಕಮಿಷನ್ setup ಮಾಡಿದ್ರು ಇತ್ಯಾದಿ ಇತ್ಯಾದಿ. ನಾನು ಅವಳಿಗೆ ಸಮಾಧಾನ ಮಾಡ್ದೆ, ''ಬೇಜಾರು ಮಾಡ್ಕೊಬೇಡ್ವೇ, ನಾನು ಮುಂದಕ್ಕೆ ಬಂದಿಲ್ವಾ(?) ನಿಮ್ಮಕ್ಕನ್ನ ನೋಡು, ನಮ್ಮ ಸಂಸಾರಕ್ಕೆ ಇದು ಆಗಿ ಬಂದಿದೆ. ಇದರಿಂದ ನಿನಗೆ ಶುಭವು'' ಅಂದೆ.

ಈಗೋ, ಬಂದೆ, ನಿಮ್ಮ ಮನೇಲಿ ಪ್ರಮೀಳಾ ರಾಜ್ಯಾನಾ, ಹೆಂಗಸರದ್ದಾಯ್ತು ಅಂತ ಇಡೀ ಸಂಸಾರಕ್ಕೆ ಆಯ್ತು ಅಂತೀಯಲ್ಲಾ ಅನ್ತೀರಾ? ನಮ್ಮ ಸಂಸಾರದಲ್ಲಿ ಹೆಂಗಸರದ್ದು ಮೆಜಾರಿಟಿ. ಇನ್ನು democracy ಲಿ minority should not be negleted ಅಂತ C.K. Allen ಪುಸ್ತಕ ಹೇಳತ್ತೆ. ಅದಕ್ಕೆ ನಮ್ಮವರಿಗೆ ಕೂಡ ರಿ-ಎಕ್ಸಾಂ ಬೆಂಬತ್ತಿತು. ಆದ್ರೆ he faced it from the other side of the table. ಯಾವುದೋ departmenetal exam ನ ನಿರ್ವಹಿಸ್ತಾ ಇದ್ದಾಗ, ಇದ್ದ ಒಂದೇ ಒಂದು session ಕೂಡ ಒಂದು ಘಂಟೆಯ ನಂತರ ರದ್ದು ಮಾಡಬೇಕಾಗಿ ಬಂದು, ಮತ್ತೆ ಗೋಜು ಮೊದಲಿನಿಂದ ಪ್ರಾರಂಭವಾಗಬೇಕೆ?

ಗಂಡಸರದ್ದೇ ಅನ್ನಿ. ಅಥವಾ minority ದ್ದೇ ಅನ್ನಿ, ನಮ್ಮವರ ಪ್ರಕಾರ ಅವರ ಕಷ್ಟವೇ ನಮ್ಮೆಲ್ಲರದ್ದಕ್ಕಿಂತ ಹೆಚ್ಚು ಕಷ್ಟ ಅಂತ ಸಾಧಿಸ್ತಾ ಇರ್ತಾರೆ. ಅವರ ಮಕ್ಕಳು ಅವರನ್ನು ತಿದ್ದಲು ಪ್ರಯತ್ನಿಸ್ತಲೇ ಇದ್ದಾರೆ. ನಾನು ಮಾತ್ರ ಜಡತ್ವದಲ್ಲೇ ಇದ್ದೇನೆ, ಇರುತ್ತೇನೆ ಕೂಡ.



# ಹೀಗೊಂದು ಧರ್ಮಯುದ್ಧ

– ಶಿವು

## ಇಂದ್ರಲೋಕದಲ್ಲಿ ಕಳವಳ

ಬೃಹಸ್ಪತಿ ಸರಸರನೆ ನಡೆದು ಬಂದು ಸಭೆಯನ್ನು ಪ್ರವೇಶಿಸಿದರು. ಇಂದ್ರನ ಆಸ್ಥಾನದ ಇತರ ಪ್ರಮುಖರು ಅಷ್ಟು ಹೊತ್ತಿಗಾಗಲೇ ಅಲ್ಲಿಗೆ ಆಗಮಿಸಿ, ಆಸೀನಾರೂಢರಾಗಿದ್ದರು. ಸುತ್ತಲಿನ ಚಿಂತಾಕ್ರಾಂತ ಮುಖಗಳನ್ನು ಒಂದೇ ನೋಟದಲ್ಲಿ ಗ್ರಹಿಸಿದ ದೇವಗುರುಗಳು, ಹೆಚ್ಚು ವಿಳಂಬವಿಲ್ಲದೇ ತಮ್ಮ ಹೇಳಿಕೆಯನ್ನು ಪ್ರಾರಂಭಿಸಿದರು.

''ದೇವತೆಗಳೇ, ಗಂಧರ್ವರೇ, ಕಿನ್ನರರೇ ಹಾಗೂ ಕಿಂಪುರುಷರೇ, ನಾವೆಲ್ಲಾ ಇಂದು ಅತ್ಯಂತ ತ್ವರಿತವಾಗಿ ಈ ಸಭೆಯಲ್ಲಿ ಸೇರಿರುವ ಕಾರಣ ನಿಮಗೆಲ್ಲಾ ತಿಳಿದೇ ಇದೆ. ನಮ್ಮ ರಾಜ ದೇವೇಂದ್ರ ನಿನ್ನೆ ಮಧ್ಯಾಹ್ನ ಮೂರು ಘಳಿಗೆಯ ಸಮಯದಲ್ಲಿ ಪುಷ್ಪಕವಿಮಾನದಲ್ಲಿ ಸಂಚರಿಸುತ್ತಿದ್ದಾಗ ರಾಕ್ಷಸಾಧಮನೊಬ್ಬನು ಅವರ ವಿಮಾನವನ್ನು ಹೈಜಾಕ್ ಮಾಡಿ, ವಿಮಾನ ಬಲವಂತವಾಗಿ ರಾಕ್ಷಸರಾಜ್ಯದಲ್ಲಿ ಇಳಿಯುವಂತೆ ಮಾಡಿದ್ದಾನೆ. ನಮ್ಮ ಬೇಹುಗಾರರಿಂದ ಬಂದಿರುವ ಇತ್ತೀಚಿನ ಸುದ್ದಿಯ ಪ್ರಕಾರ ದುಷ್ಟ ದಾನವರು ನಮ್ಮ ನೆಚ್ಚಿನ ನಾಯಕನನ್ನು ಸೆರೆ ಹಿಡಿದಿರುವಂತೆ. ಸುದ್ದಿ ತಿಳಿದ ತಕ್ಷಣ ದೈವದತ್ತವಾದ ನನ್ನ ಅಧಿಕಾರದಿಂದ ತುರ್ತು ಪರಿಸ್ಥಿತಿ ಘೋಷಿಸಿ ಮಂತ್ರಾಲೋಚನೆಗಾಗಿ ನಿಮ್ಮನ್ನೆಲ್ಲಾ ಇಲ್ಲಿಗೆ ಕರೆಸಿದ್ದೇನೆ. ಈಗ ನಮ್ಮ ಮುಂದಿನ ಹೆಜ್ಜೆ ಯಾವ ದಿಶೆಯಲ್ಲಿಡಬೇಕೆಂಬುದನ್ನು ನೀವೆಲ್ಲಾ ಒಬ್ಬೊಬ್ಬರಾಗಿ ತಿಳಿಸಿದರೆ ನಾನು ಆಭಾರಿ'' ಹೀಗೆಂದು ದೇವಗುರು ಕರವಸ್ತ್ರವನ್ನು ಜೇಬಿನಿಂದ ತೆಗೆದು ಬೆವರೊರೆಸಿಕೊಂಡರು. ಸಾಮಾನ್ಯವಾಗಿ ದೇವತೆಗಳು ಬೆವರುವುದಿಲ್ಲ ಎಂಬುದು ನಿಜವಾದರೂ ಈ ಎಕ್ಸ್ಟ್ರೀಮ್ ಪ್ರವೊಕೇಷನ್ ಪ್ರಕೃತಿಯ ನಿಯಮಗಳನ್ನು ಬೇರುಸಹಿತ ಅಲ್ಲಾಡಿಸಿತ್ತು. ಸಭೆಯಲ್ಲಿ ಮೌನ ಆವರಿಸಿತ್ತು. ಹಿಂದಿನ ಸಾಲಿನವರು, ತಮ್ಮ ಮುಖಂಡರ ಮುಂದೆ ಬಾಯಿ ತೆರೆಯಲು ಹಿಂಜರಿದರು. ನಿಧಾನವಾಗಿ ಅಗ್ನಿದೇವ ಎದ್ದುನಿಂತು,

''ಗುರುದೇವ, ಕನಸಿನಲ್ಲಿಯೂ ಊಹಿಸಲಾಗದಷ್ಟು ಅನ್ಯಾಯ ಆಗಿಹೋಗಿದೆ. ರಾಕ್ಷಸಾಧಮರು ಈ ಬಾರಿ ಲಕ್ಷ್ಮಣರೇಖೆಯನ್ನು ದಾಟಿದ್ದಾರೆ. ಪೂಜ್ಯರು ಅಪ್ಪಣೆ ಕೊಟ್ಟರೆ ಈಗಲೇ ನಾನು ರಾಕ್ಷಸರಾಜ್ಯಕ್ಕೆ ತೆರಳಿ ಆಗ್ನೇಯಾಸ್ತ್ರವನ್ನು ಅವರ ಮೇಲೆ ಪ್ರಯೋಗಿಸಿ ಅವರನ್ನೆಲ್ಲಾ ಸುಟ್ಟು ಬೂದಿ ಮಾಡಿಬಿಡುತ್ತೇನೆ. ಈ evil doers

ಅನ್ನು ಮೊಳಕೆಯಲ್ಲೇ ಚಿವುಟದಿದ್ದರೆ ಅವು ಮುಂದೆ ಬೃಹತ್ತಾಗಿ ಬೆಳೆದು ನಮಗೆ ಅತ್ಯಧಿಕ ಅಪಾಯತರುವ ಸಂಭವವಿದೆ. ಈ ನಮ್ಮ ಧರ್ಮಯುದ್ಧದಲ್ಲಿ ಗಂಧರ್ವರ, ಕಿನ್ನರರ, ಕಿಂಪುರುಷರ ನೆರವು ಸಹಕಾರ ನಮ್ಮೊಂದಿಗಿದೆ ಎಂಬುದು ಸರ್ವವಿದಿತ. ಅತಳ, ವಿತಳ, ಪಾತಾಳವೇ ಮುಂತಾದ ಸಪ್ತಲೋಕಗಳ ವಾಸಿಗಳೊಬ್ಬೊಬ್ಬರೂ ನಮ್ಮೊಂದಿಗೋ ಅಥವಾ ಖೂಳ ರಾಕ್ಷಸರೊಂದಿಗೋ ಎಂಬುದನ್ನು ನಿರ್ಧರಿಸುವ ಕ್ಷಣ ಸನ್ನಿಹಿತವಾಗಿದೆ. ಧರ್ಮ ಎಲ್ಲಿದೆಯೋ ಅಲ್ಲಿಯೇ ಜಯ. ಹರ ಹರ ಮಹದೇವ'' ಎಂದು ಒಂದು ಭರ್ಜರಿ ಭಾಷಣ ಬಿಗಿದು, ಶ್ರೀಮದ್ಗಾಂಭೀರ್ಯದಿಂದ ಪುನಃ ಆಸನಾಸೀನನಾದ. ಹಿಂದಿನ ಸಾಲಿನವರು ''ಉಘೇ, ಉಘೇ'' ಎಂದು ಉದ್ಘೋಷಿಸಿ, ಕರತಾಡನ ಮಾಡಿ ತಮ್ಮ ಹರ್ಷ ಸೂಚಿಸಿದರು. ಸಭೆಯಲ್ಲಿ ಸದ್ದಡಗಿದ ಮೇಲೆ ವರುಣದೇವ ತನ್ನ ಅಭಿಪ್ರಾಯವನ್ನು ಮಂಡಿಸಲು ವೇದಿಕೆಗೆ ಬಂದ.

''ದೇವಗುರುಗಳಿಗೆ ವಂದನೆ. ಅಗ್ನಿದೇವನ ಸಾಮರ್ಥ್ಯದಲ್ಲಿ ನನಗೆ ಎಳ್ಳಷ್ಟೂ ಸಂಶಯವಿಲ್ಲ. ಆದರೆ ಅವನ ಧರ್ಮಯುದ್ಧದ ಆಟಾಟೋಪದಲ್ಲಿ, ಸೆರೆ ಸಿಕ್ಕಿರುವ, ನಿರಾಯುಧನಾದ ನಮ್ಮ ದೇವೇಂದ್ರನ ಗತಿ ಏನಾಗಬಹುದೆಂದು ಸ್ವಲ್ಪ ಯೋಚಿಸಿ. ರಾಮಾವತಾರದಲ್ಲಿ ರಾಕ್ಷಸ ಸಂಹಾರವಾದ ಬಳಿಕ, ಯಾವುದೋ ಒಂದು ರೀತಿಯ ಶಾಂತಿಯುತ ಸಹಬಾಳ್ವೆಯನ್ನು ಇಲ್ಲಿನವರೆಗೆ ರಾಕ್ಷಸರು ನಮ್ಮೊಂದಿಗೆ ನಡೆಸಿಕೊಂಡು ಬರುತ್ತಿದ್ದಾರೆ. ಈ ಸೂಕ್ಷ್ಮ ಸಮತೋಲನವನ್ನು ಈಗ ಕೆಡಿಸಿದರೆ ರಾಕ್ಷಸರಿಂದ ಇನ್ನೂ ಹೆಚ್ಚು ಭಯೋತ್ಪಾದಕ ಘಟನೆಗಳು ನಡೆಯುವ ಸಂಭವವಿದೆ. ಮಾರೀಚ ಸುಬಾಹುಗಳ ಕಾಲದಿಂದ ಭಯೋತ್ಪಾದನೆ ಅವರ ಹುಟ್ಟುಗುಣ. ಅದನ್ನು ನಾವೇ ಪ್ರೋತ್ಸಾಹಿಸುವುದರ ಬದಲು, ಅವರ ಈಚಿನ ಹೈಜಾಕ್‌ಗೆ ಇರಬಹುದಾದ ಬಲವತ್ತರ ಕಾರಣಗಳೇನಿರಬಹುದೆಂದು ಅವರೊಂದಿಗೇ ಚರ್ಚಿಸಿ, ಸಂಧಾನದ ಮಾತುಕತೆ ಆರಂಭಿಸಿದರೆ ಒಳಿತು ಅನ್ನಿಸುತ್ತದೆ ನನಗೆ.''

ಸಭೆಯಲ್ಲಿ ಗುಲ್ಲೋ ಗುಲ್ಲು. ''ಭಯೋತ್ಪಾದನೆಯೊಂದಿಗೆ ರಾಜಿ ಸಲ್ಲ'' ಎಂಬ ಒಂದೆರಡು ಕೂಗುಗಳೂ ಕೇಳಿಬಂದವು. ಒಮ್ಮೆಲೇ ಎಲ್ಲರ ನೋಟಗಳೂ ವೇದಿಕೆಯ ಬಲಭಾಗಕ್ಕೆ ಕೇಂದ್ರೀಕೃತವಾದವು. ಶನಿ ಮಹರಾಜ ತನ್ನ ಹೇಳಿಕೆ ಪ್ರಾರಂಭಿಸಿದ್ದ.

''ಪೂಜ್ಯ ಗುರುವರ್ಯ, ನಿನ್ನೆ ನಡೆಯಿತೆನ್ನಲಾದ ಘಟನೆಯಲ್ಲಿ ನನಗೆ ಅರ್ಥವಾಗದ ಅಂಶಗಳು ಅನೇಕ. ಮೊದಲಿಗೆ ದೇವೇಂದ್ರ ಪುಷ್ಪಕ ವಿಮಾನದಲ್ಲಿ ಎಲ್ಲಿಗೆ ಹೊರಟಿದ್ದ ಎಂಬುದು ಯಾರಿಗೂ ತಿಳಿದಂತಿಲ್ಲ. ರಾಕ್ಷಸನೊಬ್ಬ ವಿಮಾನವನ್ನು ಪ್ರವೇಶಿಸಿದ್ದಾದರೂ ಹೇಗೆ? ಈ ಸೆಕ್ಯೂರಿಟಿ ಲ್ಯಾಪ್ಸಿಗೆ ಕಾರಣರಾರು? ನಿಮಗೇ ತಿಳಿದಂತೆ ಪುಷ್ಪಕ, ಚಾಲಕ ರಹಿತ ವಿಮಾನ. ಕೇವಲ ದೇವೇಂದ್ರನ

ಮನೋಭೀಷ್ಟವನ್ನು ಅನುಸರಿಸಿ ಅದು ಬೇಕೆಂದೆಡೆ ಹಾರುತ್ತದೆ. ಹಾಗೇನಾದರೂ ಆಗಿದ್ದಲ್ಲಿ, ದೇವೇಂದ್ರ ರಾಕ್ಷಸರಾಜ್ಯಕ್ಕೆ ತೆರಳಲು ಕಾರಣವಾದರೂ ಏನು? ಅಲ್ಲಿ ತನಗೆ ಕಾದಿದ್ದ ಅಪಾಯದ ಅರಿವೇ ಇರಲಿಲ್ಲವೇ ಅವನಿಗೆ. ಇವೆಲ್ಲ ಪ್ರಶ್ನೆಗಳಿಗೆ ಸಮಾಧಾನ ದೊರಕಿದ ಹೊರತೂ ಮುಂದಿನ ನಿರ್ಧಾರಗಳು ಸುಲಭ ಅಲ್ಲ. ಗುರುವರ್ಯರು ಈ ಬಗ್ಗೆ ಗಮನ ಹರಿಸುವರೆಂದು ನಂಬಿರುವೆ.''

ಶನಿ ಮಹಾರಾಜನ ಮಾತಿನುದ್ದಕ್ಕೂ ಜೋರಾಗಿ ತಲೆದೂಗುತ್ತಿದ್ದ ಹಿಂದಿನ ಸಾಲಿನವರು, ಮಾತು ನಿಂತಮೇಲೆ ತೂಗುತ್ತಿದ್ದ ತಲೆಗಳನ್ನು ತಟಕ್ಕನೆ ನಿಲ್ಲಿಸಿ ಆದಷ್ಟು ಮುಗ್ಧ ಮುಖಭಾವಗಳನ್ನು ಅಂಟಿಸಿಕೊಂಡು ಕೂತರು.

ಕೊನೆಯಲ್ಲಿ ಗಂಧರ್ವರ ಮುಖಂಡ ಚಿತ್ರಸೇನ ಎದ್ದು,

''ಪೂಜ್ಯ ಬೃಹಸ್ಪತಿಗಳಲ್ಲಿ ಒಂದು ಅರಿಕೆ. ಕ್ಷಣ, ಕ್ಷಣಕ್ಕೂ ಬದಲಾಗುತ್ತಿರುವ ಈ ತುರ್ತು ಪರಿಸ್ಥಿತಿಯಲ್ಲಿ ನೀವು ನಮ್ಮೆಲ್ಲರ ಅಭಿಪ್ರಾಯಗಳಿಗೆ ಕಾದು ಮುಂದುವರಿಯುವುದು ಸೂಕ್ತವಲ್ಲ. ನೀವೇ ಎಲ್ಲ ನಿರ್ಧಾರಗಳನ್ನೂ ತೆಗೆದುಕೊಂಡು ನಮ್ಮ ನೆಚ್ಚಿನ ನಾಯಕರು ನಮಗೆ ಹಿಂತಿರುಗುವಂತೆ ಮಾಡಬೇಕೆಂದು ಕೋರಿಕೆ'' ಎಂದು ಕಾಂಗ್ರೆಸ್ ಹೈಕಮಾಂಡ್ ರೀತಿ ಮಾತನಾಡಿದಾಗ, ತಮ್ಮ ಮೇಲಿನ ಜವಾಬ್ದಾರಿ ತಪ್ಪಿದ ಸಂತಸ, ಸಂಭ್ರಮಗಳಿಂದ ಹಿಂದಿನ ಸಾಲಿನವರು ಕಿವಿಗಡಕಿಚ್ಚುವಂತೆ ಕರತಾಡನ ಮಾಡಿ ತಮ್ಮ ಮೆಚ್ಚುಗೆ ಸೂಚಿಸಿದರು.

## ದೇವಯಾನಿ ಯಾರು?

''ಇಂದ್ರವಾಹಿನಿ'' ಛಾನಲ್‌ನಲ್ಲಿ, ಇಂದ್ರಲೋಕದ ಜನಪ್ರಿಯ ಸಾಪ್ತಾಹಿಕ ''ರಾವಣಪತ್ರಿಕೆ''ಯ ಸಂಪಾದಕರ ಸಂದರ್ಶನ ನಡೆದಿತ್ತು. ಟಿ.ವಿ. ಆಂಖರ್ ವರೂಥಿನಿ, ಸಂಪಾದಕರ ಮೇಲೆ ಪ್ರಶ್ನೆಗಳ ಮಳೆಗರೆದಿದ್ದಳು.

''ನಿಮ್ಮ ಪತ್ರಿಕೆಯಲ್ಲಿ ಈಚಿನ ವಿದ್ಯಮಾನಗಳ ಕುರಿತು ಸುಧೀರ್ಘ ಲೇಖನವೊಂದು ಬಂದಿದೆಯಂತೆ. ಅದರ ಬಗ್ಗೆ ನಮ್ಮ ಪ್ರೇಕ್ಷಕರಿಗೆ ಸ್ವಲ್ಪ ತಿಳಿಸುತ್ತೀರಾ?''

''ಓಹೋ, ಅಗತ್ಯವಾಗಿ. ಮೊನ್ನೆ ನಡೆದ ಸಭೆಯಲ್ಲಿ ಶನಿಮಹಾರಾಜರು ಕೇಳಿದ ಪ್ರಶ್ನೆಗಳಿಗೆ ಉತ್ತರಗಳನ್ನು ಹುಡುಕಲು ನಾವು ನಮ್ಮ ವರದಿಗಾರರನ್ನು ಕಳಿಸಿದ್ದೆವು. ಆತ ರಾಕ್ಷಸರಾಜ್ಯಕ್ಕೆ ತೆರಳಿ ಅಲ್ಲಿಂದ ನಮಗೆ ಒಂದು ಬಹು ಕುತೂಹಲಕಾರಿ ವರದಿಯನ್ನು ಕಳಿಸಿದ್ದಾನೆ. ಅದರ ಪ್ರಕಾರ ನಮ್ಮ ಇಂದ್ರದೇವ ಹೈಜಾಕ್ ದಿನ ಬೆಳಗ್ಗೆ ಪ್ರಶ್ಯಾಂತ ಪುರಕ್ಕೆ ತೆರಳಿದ್ದನಂತೆ...''

''ಒಂದ್ನಿಮಿಷ. ಈ ಪ್ರಕೃಂತಪುರ ಅನ್ನೋದು ಎಲ್ಲಿದೆ?''

''ಅದು ದೇವಲೋಕದ್ದೇ ಒಂದು ಊರು. ರಾಕ್ಷಸರಾಜ್ಯದ ಗಡಿ ಪ್ರದೇಶದಲ್ಲಿದೆ.''

''ಅಲ್ಲಿಗೆ ಏಕೆ ಹೋಗಿದ್ದರು ನಮ್ಮ ಮಹಾರಾಜರು?''

''ಅಲ್ಲೇ ಇರೋದು ನೋಡಿ ಸ್ವಾರಸ್ಯ. ದೇವಯಾನಿ ಎಂಬ ರಾಕ್ಷಸ ಕನ್ಯೆಯನ್ನು ಭೇಟಿಮಾಡಲು ಹೋಗಿದ್ದರಂತೆ ಇಂದ್ರದೇವ. 'ಭೇಟಿ' ಮುಗಿದ ಮೇಲೆ ಆ ರಾಕ್ಷಸಕನ್ಯೆ ತನ್ನನ್ನು ಊರಿಗೆ ಬಿಟ್ಟು ಹಿಂತಿರುಗುವಂತೆ ಇಂದ್ರದೇವರ ಮನವೊಲಿಸಿದಳಂತೆ. ಕರುಣಾರ್ದ್ರಹೃದಯಿ ಇಂದ್ರರು ದೇವಯಾನಿಯನ್ನು ಪುಷ್ಪಕದಲ್ಲಿ ಮೃದುವಾಗಿ ಕುಳ್ಳಿರಿಸಿ ರಾಕ್ಷಸ ರಾಜ್ಯದಲ್ಲಿ ಇಳಿದು ಆಕೆಯನ್ನು ಬೀಳ್ಕೊಡುತ್ತಿರುವಾಗ ಇಬ್ಬರು ರಕ್ಕಸರು ನಮ್ಮ ರಾಜರನ್ನು ಎತ್ತಿಕೊಂಡು ಗುಡ್ಡಗಾಡಿಗೆ ಓಡಿಹೋದರಂತೆ...''

''ಇದರಲ್ಲಿ ದೇವಯಾನಿಯ ಪಾತ್ರ ಏನಿರಬಹುದು?''

''ನನಗೆ ತಿಳಿದಿರುವಂತೆ...'' ಒಮ್ಮೆಲೇ ಪವರ್ ಕಟ್ ಆಗಿ ಸಂದರ್ಶನವನ್ನ ತುಂಡರಿಸಿತು. ಅತ್ತ ಇಂದ್ರಲೋಕದ ಸೆಂಟ್ರಲ್ ಸೆನ್ಸಾರ್ ಸಂಸ್ಥೆಯಲ್ಲಿ ತೂಕಡಿಸುತ್ತಿದ್ದ ಕಿಂಪುರುಷನೊಬ್ಬ ತಟಕ್ಕನೆ ಎಚ್ಚೆತ್ತು ಛಾನಲ್ ನಲ್ಲಿ ಹೊರಬೀಳುತ್ತಿದ್ದ ದಾರುಣ ಸತ್ಯವನ್ನು ನೋಡಲಾರದೇ ಮೇನ್ ಸ್ವಿಚ್‌ನ ಆಫ್ ಮಾಡಿದ್ದ. ಹಿಂದೊಮ್ಮೆ ಅವನ ಬಾಸ್ ಹೇಳಿದ್ದ "Heads will roll' ಎಂಬ ಮಾತು ಅವನ ಮನವನ್ನು ವಿಹ್ವಲ ಗೊಳಿಸಿತ್ತು.

## ದಾನವವಾಹಿನಿ

ಬೃಹಸ್ಪತಿ ಮಂತ್ರಮುಗ್ಧನಾಗಿ ಟಿವಿ ತೆರೆಯನ್ನು ವೀಕ್ಷಿಸುತ್ತಿದ್ದರು. ದಾನವವಾಹಿನಿಯಲ್ಲಿ ಆರ್ಶ್ಯಶೃಂಗಿ ಎಂಬ ರಾಕ್ಷಸ ಮುಖಂಡನ ಮಾತುಕತೆ ನಿರರ್ಗಳವಾಗಿ ನಡೆದಿತ್ತು.

'ಹೌದು, ವಿಶ್ವದ ಅತಿದೊಡ್ಡ ಭಯೋತ್ಪಾದಕನನ್ನು ನಾವು ಇದೀಗ ಸೆರೆಹಿಡಿದಿದ್ದೇವೆ. ಅವನ ಹೆಸರು ಇಂದ್ರ. ಅನಾದಿಕಾಲದಿಂದ ದೇವತೆಗಳು ನಮ್ಮ ಮೇಲೆ ದಬ್ಬಾಳಿಕೆ ನಡೆಸಿದ್ದಾರೆ. ಅಮೃತಮಥನದಲ್ಲಾದ ಅನ್ಯಾಯವನ್ನ ನಾವು ಮರೆಯಲು ಸಾಧ್ಯವೇ. ಎರಡು ಬಣಗಳೂ ಒಟ್ಟಿಗೆ ಕೆಲಸ ಮಾಡಬೇಕೆಂದು ಒಪ್ಪಿಗೆಯಾದ ಮೇಲೆ, ಅದರ ಫಲವನ್ನೂ ಸಹಾ ಸಮನಾಗಿ ಹಂಚಿಕೊಳ್ಳುವುದು



ನ್ಯಾಯಸಮ್ಮತ. ಅದು ಬಿಟ್ಟು ಈ ಇಂದ್ರ, ಮೋಹಿನಿಯ ಸಹಾಯದಿಂದ ನಮ್ಮನ್ನು ಅಮೃತದಿಂದ ವಂಚಿಸಿದ. ರಾವಣ ಇಂದ್ರಸ್ಥಾನವನ್ನು ಆಕ್ರಮಿಸಬಾರದೆಂದು ಈ ಜನ ರಾಮಾಯಣದ ನಾಟಕವನ್ನೇ ಆಡಿದ್ದು ನಮಗೆ ತಿಳಿಯದೇ. ಮಾನವಂತ ಸೋದರಿ ಶೂರ್ಪನಖಿಗೆ ಆದ ಅವಮಾನ, ತಾಟಕಿಗೆ ಆದ ದುರಂತ ಮರಣ ಸಿಂಹಿಕೆಯ ಸಾವು ಇವೆಲ್ಲವೂ ಇಂದ್ರ ಪ್ರೇರಿತ ಎಂಬುದು ಸರ್ವವಿದಿತ. ಪಾಪ, ಮಧು ಕೈಟಭರಿಗಾದ ಅನ್ಯಾಯವನ್ನು ನೆನೆದರೆ ಕಣ್ಣು ಮಂಜಾಗುತ್ತದೆ. ದೇವಲೋಕದ ದಬ್ಬಾಳಿಕೆ ಇನ್ನು ಸಾಕು. ನಾವು ಎಚ್ಚೆತ್ತಿದ್ದೇವೆ. ಇಂದ್ರ ಈಗ ನಮ್ಮ ಸೆರೆಯಾಳು. ಸಾಮಾಜಿಕ ನ್ಯಾಯದ ಬೀಸು ಬಿರುಗಾಳಿ ದೇವಲೋಕವನ್ನು ತತ್ತರಿಸುವಂತೆ ಮಾಡಬಲ್ಲುದು. ಪ್ರತಿಯೊಬ್ಬ ರಾಕ್ಷಸನೂ ಈ ಪವಿತ್ರಕಾರ್ಯದಲ್ಲಿ ಸಮಭಾಗಿ.''

## ಒಂದು ರಹಸ್ಯ ಭೇಟಿ

ನಿಶಿರಾತ್ರಿ. ಬೃಹಸ್ಪತಿಯ ಅರಮನೆಯ ಅಂಗಣದಲ್ಲಿ ದೀಪವೊಂದು ಉರಿಯುತ್ತಿದೆ. ಗುರುವರ್ಯ ಏನನ್ನೋ ಕಾತರದಿಂದ ನಿರೀಕ್ಷಿಸುತ್ತಿದ್ದಾರೆ. ಒಮ್ಮೆಲೇ ವಿದ್ಯಾಧರಿಯೊಬ್ಬಳು ಅಂಗಣವನ್ನು ಪ್ರವೇಶಿಸಿದಳು. ಅವಳ ಕೈಯ್ಯಲ್ಲಿ ಒಂದು ಬೆಳ್ಳಿಯ ಗಿಂಡಿ. ಬಹು ಜಾಗರೂಕತೆಯಿಂದ ಆ ರೂಪಸಂಪನ್ನೆ ಗಿಂಡಿಯನ್ನು ಕೃಷ್ಣಾಜಿನ ಹೊದ್ದಿಸಿದ ಪೀಠದ ಮೇಲಿಟ್ಟು ಅಂತರ್ಧಾನವಾದಳು. ಬೃಹಸ್ಪತಿಗಳು ಗಿಂಡಿಯನ್ನುದ್ದೇಶಿಸಿ ''ಈಗ ಹೊರಬರಬಹುದು'' ಎಂದಾಕ್ಷಣ ರಾಕ್ಷಸಗುರು ಶುಕ್ರಾಚಾರ್ಯರು ಗಿಂಡಿಯಿಂದ ಹೊರಬಂದು ಗುರುವರ್ಯರ ಮುಂದೆ ಕುಳಿತರು.

''ಈಗೇನು ಮಾಡೋಣ? ನನಗಂತೂ ಏನೂ ತೋಚ್ತಾ ಇಲ್ಲ'' ದೇವಗುರುಗಳು ತಮ್ಮ ಚಿಂತೆಯನ್ನು ಹೊರಗೆಡಹಿದರು. ''ಇಂದ್ರದೇವ ಇನ್ನು ಮುಂದೆ ಇಂದ್ರ ಪದವಿ ತ್ಯಜಿಸಿದರೆ ಮಾತ್ರಾ ಅವನ ಬಿಡುಗಡೆ ಎಂದು ನಮ್ಮವರು ಪಟ್ಟು ಹಿಡಿದಿದ್ದಾರೆ. ಅದೇನಾದರೂ ಸಾಧ್ಯವೇ?'' ಶುಕ್ರಾಚಾರ್ಯರ ದನಿಯಲ್ಲಿ ಪ್ರಾಮಾಣಿಕತೆಯಿತ್ತು. ಗುರುವರ್ಯರು ಒಂದು ವಿಷಣ್ಣ ನಗೆ ನಕ್ಕು ''ಲಕ್ಷಾಂತರ ವರ್ಷಗಳಿಂದ ಕುರ್ಚಿಗೇ ಅಂಟಿಕೊಂಡು ಕೂತಿರೋ ಆಸಾಮೀಗೆ ಅದು ಹೇಗೆ ಒಪ್ಪಿಗೆ ಆಗುತ್ತೆ. ಬೇರೇ ಏನೂ ಮಾರ್ಗವೇ ಇಲ್ಲವೇ'' ಎಂದು ಆತಂಕದಿಂದ ಕೇಳಿದರು. ''ಒಂದು ಮಾರ್ಗ ಕಾಣಿಸ್ತಾ ಇದೆ. ಭೂಲೋಕದಲ್ಲಿ ಒಬ್ಬ ಕುಶಾಗ್ರಮತಿ ಇರುವನಂತೆ. ಅವನನ್ನು ಕರೆಸಿ ಇಂದ್ರದೇವನಿಗೆ ಬುದ್ಧಿ ಹೇಳಿಸಿದರೆ ಇಂದ್ರ ನಮ್ಮ ಸಲಹೆ ಒಪ್ಪಬಹುದೇನೋ. ಏನಂತೀರಾ ಗುರುಗಳೇ?'' ಶುಕ್ರಾಚಾರ್ಯ ಕೇಳಿದರು. ''ನಿಮಗೆಲ್ಲೋ ಹುಚ್ಚು. ಆದರೂ ನಿಮ್ಮ ಯತ್ನಾನೂ ನಡೆಸಿಬಿಡಿ. ದೈವೇಚ್ಛೆ'' ಎಂದರು ಗುರುವರ್ಯ. ''ಚಿಂತೆ ಬಿಡಿ. ನಾವೆಲ್ಲಾ ವ್ಯವಸ್ಥೆ ಮಾಡುವೆ'' ಎನ್ನುತ್ತಾ ರಾಕ್ಷಸ ಗುರುಗಳು ಗಿಂಡಿಯೊಳಗೆ ಪುನಃ ಸೇರಿಕೊಂಡರು. ಬೃಹಸ್ಪತಿಗಳ ಆಣತಿಯ ಮೇರೆಗೆ ವಿದ್ಯಾಧರಿ ಪುನಃ ಪ್ರತ್ಯಕ್ಷಳಾಗಿ ಗಿಂಡಿಯನ್ನು ಜಾಗರೂಕತೆಯಿಂದ ಹೊರಕ್ಕೆ ಒಯ್ದಳು.

## ಒಂದು ಬಹಿರಂಗ ಹೇಳಿಕೆ

ಇಂದ್ರಲೋಕ ಸಡಗರದಿಂದ ತುಂಬಿತ್ತು ರಾಕ್ಷಸಲೋಕದಿಂದ ಪಾರಾಗಿ ಬಂದ ದೇವೇಂದ್ರ ಒಂದು ಪ್ರೆಸ್ ಕಾನ್ಫರೆನ್ಸ್ ನಡೆಸಿದ್ದ. ನೆರೆದಿದ್ದ ವರದಿಗಾರರು ಬಹು ಕುತೂಹಲದಿಂದ ತಮ್ಮ ಒಡೆಯನ ಮಾತುಗಳನ್ನು ಬರೆದುಕೊಳ್ಳುತ್ತಿದ್ದರು. ''ಸ್ನೇಹಿತರೇ, ಯಾವುದೋ ತಾಂತ್ರಿಕ ಕಾರಣಗಳಿಂದ ನಮ್ಮ ಪುಷ್ಪಕವಿಮಾನ ದಾರಿತಪ್ಪಿ ರಾಕ್ಷಸ ರಾಜ್ಯದಲ್ಲಿ ಇಳಿಯಬೇಕಾಯಿತು. ವಜ್ರಾಯುಧವನ್ನು ಮನೆಯಲ್ಲೇ ಬಿಟ್ಟು ಬಂದಿದ್ದರಿಂದ ನಾವು ರಾಕ್ಷಸರಿಗೆ ಶರಣಾಗದೇ ಬೇರೆ ಮಾರ್ಗವಿರಲಿಲ್ಲ. ನನ್ನ ಬಂಧನದ ಅವಧಿಯಲ್ಲಿ ನನಗೇನೂ ತೊಂದರೆ ಆಗಲಿಲ್ಲ ಎಂದು ನಿಮಗೆ ತಿಳಿಸಲು ಹರ್ಷಿಸುವೆ. ರಾಕ್ಷಸರೊಂದಿಗಿದ್ದಾಗ ಅವರಿಗೆ ಋಜುಮಾರ್ಗವನ್ನು ಬೋಧಿಸಿ ಈಗ ಅವರಿಂದ ಬಿಡುಗಡೆ ಹೊಂದಿ ನಿಮ್ಮ ಮುಂದಿದ್ದೇನೆ. ನಮ್ಮ ಬಾಂಧವರಾದ ರಾಕ್ಷಸರು ಪಡುತ್ತಿರುವ ಕಷ್ಟ ಕಾರ್ಪಣ್ಯಗಳನ್ನು ನೋಡಿ ನನ್ನ ಮನ ಪರಮಾರ್ಥದತ್ತ ತಿರುಗಿದೆ. ಹಾಗಾಗಿ ನಾನು ನನ್ನ ಇಂದ್ರಪದವಿಯನ್ನು ತ್ಯಜಿಸಿ ನನ್ನ ಸಹಧರ್ಮಿಣಿ ಶಚಿದೇವಿಗೆ ಇಂದ್ರಪಟ್ಟ ಕಟ್ಟಿದ್ದೇನೆ. ನನಗೆ ದೊರಕಿದಂತೆ, ನಿಮ್ಮೆಲ್ಲರ ಸಹಕಾರ ಆಕೆಗೂ ದೊರೆಯುವ ನಂಬಿಕೆ ನನಗಿದೆ. ಈಗ ನನ್ನ ಸಂಧ್ಯಾವಂದನೆಯ ವೇಳೆಯಾದ್ದರಿಂದ ನಿಮ್ಮ ಮುಂದಿನ ಪ್ರಶ್ನೆಗಳನ್ನು ದೇವ ಗುರುಗಳು ಉತ್ತರಿಸುವರು'' ಎನ್ನುತ್ತ ಇಂದ್ರದೇವ ನಿರ್ಗಮಿಸಿದ.

## ಉಪಸಂಹಾರ

ಭೂಲೋಕದ ಕುಶಾಗ್ರಮತಿಯನ್ನು ಪುನಃ ಮರ್ತ್ಯಲೋಕಕ್ಕೆ ಕರೆದೊಯ್ಯಲು ವಿಮಾನ ಸಿದ್ಧವಾಗಿತ್ತು. ಇಂದ್ರದೇವ ತನ್ನ ಬಿಡುಗಡೆಗೆ ಕಾರಣನಾದ ಕುಶಾಗ್ರಮತಿಯನ್ನು ತುಂಬು ಹೃದಯದಿಂದ ವಂದಿಸಿ, ಬೀಳ್ಕೊಡಲು ಸನ್ನದ್ಧನಾಗುತ್ತಿದ್ದ. ಕುಶಾಗ್ರಮತಿ ''ಇಂದ್ರದೇವ, ಇನ್ನು ನೀವು ಯಾವ ಆತಂಕವಿಲ್ಲದೇ ರಾಜ್ಯಭಾರ ಮಾಡಿಕೊಂಡು ಸುಖವಾಗಿರಬಹುದು. ನಾನಿನ್ನು ಬರುತ್ತೇನೆ.'' ಎಂದು ನುಡಿದು ವಿಮಾನವನ್ನೇರಲು ಉದ್ಯುಕ್ತನಾದ. ನನ್ನ ನೆರವಿಗೆ ಬಂದ ಮರ್ತ್ಯನಿಗೆ ಒಂದು ವರ ಕೊಡಬೇಕೆನ್ನಿಸಿತು ಇಂದ್ರದೇವನಿಗೆ. ಆ ಮರ್ತ್ಯನ ಭಾಷೆಯಲ್ಲೇ ಕೇಳಿದರೆ ಆತನಿಗೆ ಸಂತೋಷವಾಗಬಹುದೆಂದು ಭಾವಿಸಿ, ದೇವೇಂದ್ರ, ''ತುಜೆ, ಕೌನ್ಸಾ ವರದಾನ್ ಛಾಹಿಯೇ?' ಎಂದು ಕೇಳಿದ.

''ಆಗಲೇ ಎಲೆಕ್ಷನ್ ಮೆ ಬಿಜೇಪಿ ಹಾರ್‍ನಾ ಛಾಹಿಯೇ, ಇಂದ್ರದೇವ್'' ಅಂದರು ಮಾನ್ಯ ಲಲ್ಲೂ.



# ಅವರು ಕಟ್ಟಿದ ಸ್ವರ್ಗ

**– ಹೆಚ್. ಗೋಪಾಲಕೃಷ್ಣ**

ನಮ್ಮ ಅಚ್ಚಮ್ಮಜ್ಜಿ ವಿಷಯ ನಿಮಗೆ ಹೇಳಿದ್ದೆನೇ? ಇಲ್ಲ ಅಂತ ತೋರುತ್ತೆ. ನಮ್ಮ ತಾಯಿಕಡೆ ಹಿರಿಯಜ್ಜಿ ಈಕೆ. ಸುಮಾರು ಮುನ್ನೂರು ವರ್ಷ ವಯಸ್ಸು ಮತ್ತು ಇನ್ನೊಂದು ಅತಿ ವಿಶೇಷದ ಸಂಗತಿ ಅಂದರೆ ಈ ಅಜ್ಜಿಗೆ ಜಗತ್ತಿನ ಪ್ರತಿಯೊಂದೂ ಅಂಗೈಮೇಲಿನ ನಲ್ಲಿಕಾಯಿ ತರಹ ತಿಳಿದಿರೋದು. ಅದಕ್ಕಿಂತಲೂ ವಿಶೇಷ ಅಂದರೆ ತೀರ ಈಚಿನ ಸಂಗತಿಗಳು ಅಂದರೆ ಯುದ್ಧ, ಶಾಂತಿ, ಪರಮಾಣು, ಈ ಮೈಲು, ಇಂಟರ್‌ನೆಟ್ಟು ಅಥವಾ ತಾಲಿಬಾನು ಈ ವಿಷಯಗಳ ಬಗ್ಗೆ ಸಹ ಅಜ್ಜಿ ಅಧಿಕಾರಯುತವಾಗಿ ತನ್ನ ಮನಸ್ಸನ್ನು ಬಿಚ್ಚಿಡುವಂತಹ ಸಾಮರ್ಥ್ಯ ಹೊಂದಿರುವುದು. ಸುಮಾರಾಗಿ ನಮ್ಮ ಸಂಸಾರದ ಪ್ರತಿಯೊಂದು ವ್ಯಕ್ತೀನೂ ಆಗಾಗ್ಗೆ ಈ ಅಜ್ಜಿಯನ್ನು ಭೇಟಿ ಮಾಡಿ ಪ್ರಪಂಚದಲ್ಲಿ ಈಚೆಗೆ ಅದೇನು ನಡೀತಿದೆ ಅಂತ ಅರಿತುಕೊಳ್ಳುವ ಆಸಕ್ತಿ ತೋರುತ್ತೇವೆ. ಅದೇ ತರಹ ಮೊನ್ನೆ ಅಕ್ಟೋಬರ್ ಎರಡನೇ ಭಾನುವಾರ ಅಜ್ಜೀನ ಭೇಟಿ ಮಾಡಲು ಹೋದೆ. ಅವತ್ತೇ ಅಜ್ಜಿ ವೆಡ್ಡಿಂಗ್ ಡೇ ಅಂತೆ (ಈಗ ತಾತ ಇಲ್ಲ - ಸುದೈವಿ!) ಅಜ್ಜಿಗೆ ಇಷ್ಟ ಅಂತ ಬಿಸಿಬೇಳೆಬಾತು, ಹೀರೇಕಾಯಿ ಬೋಂಡ, ಆಲೂಗೆಡ್ಡೆ ರಾಯಿತ ವಿಶೇಷವಾಗಿ ತಯಾರಿಸಿದ್ದರು. ಎರಡು ಸೌಟು ಮಿಡಿ ಮಾವಿನ ಸಂಗಡ ಮೊಸರನ್ನ ತಿಂದು ಮೈಸೂರು ಚಿಗುರೆಲೆಗೆ ಬಣ್ಣ ಕಟ್ಟಿದ ಸುಣ್ಣ ಹಚ್ಚುತ್ತಾ ಅಜ್ಜಿ ಎದುರಿಗೆ ಕೂತೆ. 'ಏನಜ್ಜೀ...' ಅಂದೆ.

'ಏನಜ್ಜೀ...' ಅಂತ ಅಂದ ಕೂಡಲೇ ಅಜ್ಜಿ ಹಿಂದೆ ನನ್ನೊಂದಿಗೆ ನಿಲ್ಲಿಸಿತ್ತಲ್ಲಾ ಮಾತು ಅಲ್ಲಿಂದ ಮುಂದುವರೆಸುತ್ತೆ ಅಂತ ಗೊತ್ತು. ಬ್ಯಾಂಕುಗಳಲ್ಲಿ ಈಚೆಗೆ ನಿಮ್ಮ ಪಾಸ್ ಬುಕ್‌ನ ಎಂಟ್ರೀಗೆ ಅಂತ ಕೊಟ್ಟರೆ ಒಂದು ಹೊಸಾ ಸಿಸ್ಟಂ ಬಂದಿದೆ ನೋಡಿ ಕಂಪ್ಯೂಟರ್‌ದು ಅದೇ ತರಹ ಹಿಂದಿನವರೆಗೆ ಮಾಡಿರುವ ಎಂಟ್ರಿ ಬಿಟ್ಟು ಅದು ಹೊಸಾ ಎಂಟ್ರಿ ಮಾತ್ರ ಮಾಡುತ್ತೆ! ಅಜ್ಜಿಯ ಮೆದುಳೂ ಸಹ ಅದೇರೀತಿ! ಅಜ್ಜೀ ಚೆನ್ನಾಗಿದ್ದೀಯಾ?' ಅಂತ ಅದರ ಪಕ್ಕ ಕೂತೆ. 'ಊಟವಾಯ್ತಾ ಅಪ್ಪಾ?' ಊಟ ಅಂದಕೂಡಲೇ ನೆನಪಿಗೆ ಬಂತು ನೋಡು, ಆಫ್ಘಾನಿಸ್ತಾನದಲ್ಲಿ ಹಸಿದಿರೋ ಮಕ್ಕಳಿಗೆ ಅಮೇರಿಕಾದವರು ಅದೆಂತಹ ಸಹಾಯ ಮಾಡ್ತಿದಾರೆ ತನ್ನ ಮೇಲೇ ಯುದ್ಧ ಮಾಡ್ತಿರೋ ದೇಶದ ಜನರಿಗೇನೇ ಆಹಾರ ಒದಗಿಸ್ತಿದಾರೆ ಅಂದರೆ ಅದಕ್ಕಿಂತ ಬೇರೆ ಮಾನವೀಯತೆ ಇದೆಯೇನೋ?... ಅಜ್ಜಿ ಹೀಗೇ ಮಾತಿಗೆ ಎಳೆಯೋದು; ನಿಮಗೆ ಎಳೆತವೇ ತಿಳಿದಿರದು ಆದರೆ ಸೆಳೆತಕ್ಕೆ ಒಳಗಾಗಿರ್ತೀರಿ.

ಅಜ್ಜೀ ಏನು ಹೀಗಂತೀರೀ? ಅಮೇರಿಕಾ ಎಂತಹ ಕೆಲಸ ಮಾಡಿತ್ತು, ಮಾಡ್ತಿದೆ ಅಂತ ಗೊತ್ತಾ? ಅಂದೆ. ನಿನ್ನೆ ತಾನೇ ಒಬ್ಬರಿಗೆ ಒಂದು ಬುಲೆಟಿನ್ - ಕರಪತ್ರ ತಯಾರಿಸಿಕೊಟ್ಟಿದ್ದೆ ಅವರು ನೀಡಿದ ವಿವರಗಳನ್ನೇ ಅವಲಂಬಿಸಿ ಬುಲೆಟಿನ್ ತಯಾರಿಸಿಕೊಟ್ಟ ನಂತರ ಮನೇಗೆ ಬಂದು ಮಗಳ ಹತ್ತಿರ ಹೈಸ್ಕೂಲು ಕನ್ನಡ ಅಟ್ಲಾಸ್ ಇಸಕೊಂಡು ಅದರಲ್ಲಿ ಅಫ್ಘಾನಿಸ್ತಾನ ಎಲ್ಲಿದೆ? ಪಾಕಿಸ್ತಾನ ಎಲ್ಲಿದೆ ಅಂತ ಪತ್ತೆ ಹಚ್ಚಿದ್ದೆ. ಇದಕ್ಕಿಂತಲೂ ತಮಾಷೆ ಅಂದರೆ ಅಫ್ಘಾನಿಸ್ತಾನದ ನೆನಪು ನನಗೆ ಇದ್ದದ್ದು ಮಿಡಲ್‌ಸ್ಕೂಲಿನಲ್ಲಿ ನಾನು ಚರಿತ್ರೆ ಓದಿದಾಗ. ಆ ಚರಿತ್ರೆ ಪ್ರಕಾರ ಭಾರತಕ್ಕೆ ವಿದೇಶಿ ಆಕ್ರಮಣಕಾರರು ಭಾರತದ ವಾಯುವ್ಯ ಪ್ರದೇಶದಿಂದ ಧಾಳಿ ಮಾಡುತ್ತಿದ್ದರು ಮತ್ತು ಈ ವಾಯುವ್ಯ ಪ್ರದೇಶ ಅಫ್ಘಾನಿಸ್ತಾನ! ಖಲಂದರ್‌ಖಾನ್ ಎಂಬ ಮೇಷ್ಟರು ಈ ದಿಕ್ಕುಗಳನ್ನು ಹೇಗೆ ನೆನಪಿನಲ್ಲಿಟ್ಟುಕೊಳ್ಳುವುದು ಎಂದು ಒಂದು ಥಿಯರಿ ಹೇಳಿಕೊಟ್ಟಿದ್ದರು. ಅದರ ಪ್ರಕಾರ 'ಅಲೆಯಿವನೆ' ಅಂತ ಬರ್ಕ್ಕೋಬೇಕಂತೆ. 'ಲೆ' ಅಂಬೋದನ್ನ ಒಡೀಬೇಕಂತೆ. ಸಿಲೋನ್ ಇದೆಯಲ್ಲಾ ಅದರ ಕಡೆ ಅ ಅಂದರೆ ಆಗ್ನೇಯ, ಹಿಮಾಲಯದ ಕಡೆ ಯಿ ಅಂದರೆ ಈಶಾನ್ಯ ಪಾಕಿಸ್ತಾನದ ಮೂಲೆಗೆ ವ ಅಂದರೆ ವಾಯುವ್ಯ ಮತ್ತೆ ಮಿಕ್ಕಿದ್ದು ನೆ ಅಂದರೆ ನೈರುತ್ಯ ಅಂತೆ. ಇದನ್ನ ಉರು ಹೊಡೆದು ಭೂಗೋಳ, ಚರಿತ್ರೇನಲ್ಲಿ ಆ ಕಾಲದಲ್ಲಿ ಎಂಬತ್ತು ನಂಬರು ತಗೊಂಡೋನು ನಾನು. ಅಫ್ಘಾನಿಸ್ತಾನದ ಮೇಲೆ ಅಮೇರಿಕ ನಡೆಸ್ತಿರೋ ಯುದ್ಧ ಸುತರಾಂ ತಪ್ಪು ಅಂಬೋದು ನಾನು ಬರೆದ ಬುಲೆಟಿನ್‌ನ ಸಾರಾಂಶ. ಅದನ್ನೇ ಅಜ್ಜೀಗೆ ಈಗ ವಿವರಿಸಿದೆ. 'ಅಮೇರಿಕಾ ಎಂಥಹ ಹಾನಿ ಮಾಡ್ತಿದೆ ಅಂತೀ ಅಜ್ಜಿ. ಟೀವೀನಲ್ಲಿ ಅಫ್ಘಾನಿಸ್ತಾನದವರು ಅಮೇರಿಕಾದ ವರ್ಲ್ಡ್‌ಟ್ರೇಡ್ ಸೆಂಟರ್‌ನ ಕಟ್ಟಡ ಬೀಳಿಸಿ ಅಮಾಯಕ ನಾಗರಿಕರನ್ನ ಸಾಯಿಸಿದ್ದು ಹೇಳ್ತೀ. ಅದೇ ತರಹ ಅಮೇರಿಕಾದವರು ಇಸ್ರೇಲ್‌ಗೆ ಬೆಂಬಲ ನೀಡಿ ಅಲ್ಲಿ ಎಷ್ಟು ಜನ ಪ್ಯಾಲೆಸ್ತೀನಿಯರು ಸತ್ತರು ಗೊತ್ತೇ? ಪ್ರಪಂಚದಲ್ಲಿ ಎಲ್ಲೆಲ್ಲಿ ಭಯೋತ್ಪಾದಕರ ಗಲಾಟೆ ಆಗುತ್ತೋ ಅದು ಗ್ವಾಟೆಮಾಲ ಇರಲಿ, ನಿಕರಾಗುವಾದಲ್ಲಿರಲಿ, ಚಿಲಿನಲ್ಲಿರಲಿ, ಅಟ್ಟದಲ್ಲಿರಿಲಿ, ಇಂಡೋನಿಷಿಯಾ, ಇರಾನ್, ವಿಯಟ್ನಾಮು, ಕೊರಿಯಾ, ಸೊಮಾಲಿಯಾ ಎಲ್ಲೇ ಆಗಲಿ ಅಲ್ಲೆಲ್ಲಾ ಈ ಅಂಕಲ್ ಸ್ಯಾಂ ಕೈವಾಡ ಇತ್ತು ಅಜ್ಜೀ. ಜನ ಎಷ್ಟು ದಿವಸ ಅಂತ ಈ ರೀತಿ ದಬ್ಬಾಳಿಕೆ ತಡ್ಕೋತಾರೆ ಅಜ್ಜೀ. ಅವರ್ಗೂ ಸಹ ಮನಸ್ಸು ಅಂಬೋದು ಇರಲ್ವೇ?... ಅಂತ ಉದ್ದಕ್ಕೆ ಪಟ್ಟಿ ನೀಡಿದೆ.

'ಅಯ್ಯೋ ಮುಂಡೇದೇ ಅದೆಷ್ಟೊಂದು ತಿಳ್ಕಂಡದೀಯೋ...' ಅಂತ ಅಜ್ಜಿ ತಲೆ ಸವರಿತು. ''ಯಾವ ದೇಶದ ಅಮಾಯಕ ಮುಗ್ಧ ಮಕ್ಕಳು, ನಾಗರೀಕರು ಸತ್ತರೂ ಅದೂ ಈ ಧಾಳಿ ದೆಸೆಯಿಂದ ಸತ್ತರೂ ಅದು ಮನಸ್ಸಿಗೆ ದುಃಖ ತರೋ ಸಂಗತೀನೇ ಕಣೋ ಮರೀ ಆದರೂ ನನ್ನ ಮನಸ್ಸಿಗೆ ಅರ್ಥ ಆಗದೇ ಇರೋ ಒಂದು ಸಂಗತಿ ನೋಡು'' ಅಂದರು ಅಜ್ಜಿ.

'ಅದೇನಜ್ಜಿ ಅರ್ಥ ಆಗದೇ ಇರೋದು?' ಅಂದೆ.

'ಅದೇಕಣೋ ಮರೀ ಪ್ರಪಂಚದಲ್ಲಿರೋ ಸಾಬರ ದೇಶಗಳು ದೊಡ್ಡ ಸಭೆ ಸೇರಿದವಂತೆ. ಅಫಘಾನಿಸ್ತಾನದ ಮೇಲಿನ ಯುದ್ಧಕ್ಕೆ ತಮ್ಮ ಬೆಂಬಲ ಇಲ್ಲ ಅಂದವಂತೆ. ಅಂದರೆ ಭಯೋತ್ಪಾದನೆ ಮಾಡೋದು ನಾಗರೀಕರನ್ನ ಕೊಲ್ಲೋದೂ ಸರಿ ಅಂತಲೇ ಲೆಕ್ಕ?

'ಅದು ಹಾಗಲ್ಲಜ್ಜೀ...' ಅಂದೆ. ಅರ್ಧದಲ್ಲೇ 'ತಡಿ ನಾನು ಹೇಳಿಬಿಡ್ತೀನಿ. ನನ್ನ ಥಾಟ್ಸ್‌ನ ಅರ್ಧದಲ್ಲೇ ತಡೀಬೇಡ...' ಅಂತ ಮುಂದುವರೆಸಿತು ನನ್ನ ತಡೆದು.

ಅವರ ಧರ್ಮ ಗ್ರಂಥಗಳು ಭಯೋತ್ಪಾದನೆಯನ್ನ ಬೆಂಬಲಿಸೋದಿಲ್ಲವಂತೆ. ಅವರ ಧರ್ಮ ಗ್ರಂಥಗಳಲ್ಲಿ ಅವರ ಧರ್ಮವನ್ನು ಒಪ್ಪದಿರುವ ಯಾವುದೇ ಹೆಂಗಸರು ಮಕ್ಕಳನ್ನ ನಿಗ್ರಹಿಸಬೇಕು ಅಂತ ಇಲ್ಲವಂತೆ. ಸರಿ ತಾನೇ?

'ಸರಿ ಅಜ್ಜೀ ಸರಿಯಾಗೇ ತಿಳ್ಕಂಡಿದೀರೀ...' ಅಂದೆ.

'ಹೆಂಗಸರು ಮಕ್ಕಳನ್ನ ನಿಗ್ರಹಿಸಬಾರದು ಅಂತ ಧರ್ಮಗ್ರಂಥದಲ್ಲಿ ಇದ್ದರೆ ಗಂಡಸರನ್ನ ನಿಗ್ರಹಿಸಿ ಅಂತಲೇ ತಾನೇ ಅದರ ಅರ್ಥ? ನಾವು ನಮ್ಮ ಧರ್ಮ ಪ್ರಸಾರಕ್ಕೆ ಬೇಕಾದ್ದು ಮಾಡ್ತೇವೆ. ಮಿಕ್ಕವರು ಬಾಯಿ ಮುಚ್ಚಿಕೊಂಡು ತೆಪ್ಪಗೆ ನಾವು ಮಾಡಿದ ಹಾಗೆ ಮಾಡಿಸ್ಕೋಬೇಕು ಅಂತ ತಾನೇ ಅದರ ಅರ್ಥ?'

ನಾನು ಕಕ್ಕಾಬಿಕ್ಕಿ ಆಗಿಬಿಟ್ಟಿದ್ದೆ. ಈ ತರಹದ ಚಿಂತನೆ ಅಜ್ಜಿ ಮೂಲಕ ಬರಬಹುದು ಅಂತ ನಾನು ನಿರೀಕ್ಷೆನೇ ಮಾಡಿರಲಿಲ್ಲ!

ಮತ್ತೆ 'ಅದು ಹಾಗಲ್ಲಜ್ಜೀ...' ಅಂದೆ.

'ಮತ್ತೆ ಹೇಗೆ?' ಅಂತ ಅಜ್ಜಿ ಬಾಯ ತುದಿಯಲ್ಲಿ ಒಂದು ಕಿರುನಗೆ ಹರಡಿತು.

''ನೀವು ಮಾಡಿದ್ದೇ ನಿಮಗೆ ತಿರುಗ ಪಾಠ ಕಲಿಸ್ತಿದೀವಿ. ಅಂದರೆ ಮುಯ್ಯಿ ಮಾಡ್ತಿದೀವಿ. ಅದ್ಯಾವುದೋ ಹೀಬ್ರೂ ಲಾ ಇದೆಯಂತಲ್ಲಾ ಅಜ್ಜೀ ಆ್ಯನ್ ಐ ಫಾರ್ ಆ್ಯನ್ ಐ ಅಂತ. ಅಂದರೆ ಒಂದು ಕಣ್ಣಿಗೆ ಮತ್ತೊಂದು ಕಣ್ಣು ಅಂತ ಒಂಥರಾ ಸೇಡಿನ ಲೆಕ್ಕ?..'' ಅಂದೆ.

'ಆ ಕಾಲ ಮುಗೀತು ಬಿಡು, ಒಂದು ಕಣ್ಣಿಗೆ ಮತ್ತೊಂದು ಕಣ್ಣು ಅನ್ನೋ ಹಾಗಿದ್ದರೆ ಪ್ರಪಂಚದಲ್ಲಿ ಯಾರಿಗೂ ಎರಡು ಕಣ್ಣು ಎರಡು ಕಾಲು ಎರಡು ಕೈ ಈ ತರಹ ಅದೇನೂ ಜತೆ ಇರ್ತಿರಲಿಲ್ಲ. ಈಗೇನು ಗೊತ್ತಾ?... ಅಜ್ಜಿ ಮುಖ ನೋಡಿದೆ.

'ಟೆರ್ರರಿಸಂ ಅನ್ನ ಪ್ರಪಂಚದಿಂದ ತೊಡೆದು ಹಾಕಬೇಕು ಅಂಬೋದು. ಅದನ್ನ ತೊಡೆದು ಹಾಕಬೇಕು ಅಂದರೆ ನಾವು ಅದಕ್ಕೆ ಬೆಂಬಲ ನೀಡಬೇಕು, ಸರೀತಾನೇ?'

'ನಿಂಮೊಳ್ಳೆ ಲಾಜಿಕ್ಕು ಅಜ್ಜೀ' ಅಂದೆ.

'ಅಲ್ವೋ ಮರೀ ಅಮೇರಿಕಾನ ಒಂದು ಆ್ಯಂಗಲ್‌ನಿಂದ ನೋಡ್ತಿದ್ದೀ ನೀನು. ಪ್ರತಿಯೊಂದಕ್ಕೂ ಮತ್ತೊಂದು ಆ್ಯಂಗಲ್ಲು, ಮಗ್ಗಲು ಇರುತ್ತೆ ಅಂದ್ರೆ ಒಪ್ತೀತಾನೇ?'

ತಲೆ ಆಡಿಸಿದೆ. 'ಅದ್ಯಾವದೋ ನಿನ್ನ ಹೃದಯದಲ್ಲಿ ಸಾಫ್ಟ್ ಕಾರ್ನರ್ ಗಿಟ್ಟಿಸಿರುವ ಅಮೇರಿಕಾದ ಮತ್ತೊಂದು ಆ್ಯಂಗಲ್ಲು?' ಅಂತ ಚೇಡಿಸಿದೆ. ಅಜ್ಜಿ ಇಂತಹ ಚೇಡಿಕೆಗೆ ಕೋಪ ಬರಿಸಿಕೊಳ್ಳೋದಿಲ್ಲ. ಸರಾಗವಾಗಿ ಉತ್ತರಿಸುತ್ತೆ ಅಂತ ನನ್ನ ಅನುಭವ. ಅಜ್ಜಿ ಎರಡು ಸಲ ದೀರ್ಘವಾದ ಶ್ವಾಸ ಎಳೆದುಕೊಂಡಿತು. ಚಕ್ಕಳ ಮಕ್ಕಳ ಹಾಕಿ ಕೂತು ಬೆನ್ನು ನೇರವಾಗಿ ಮಾಡಿತು. ಕೇಳುವಂತವನಾಗು - ಎನ್ನುವ ರೀತಿಯಲ್ಲಿ ಅದರ ವಾದ ಮಂಡಿಸಿತು.

''ಮರೀ ನೀವು ಪ್ರೊಲಿಟೇರಿಯನ್‌ಗಳು, ಯಾವ ರೀತಿ ಯೋಚಿಸಿದರೂ ಅಮೇರಿಕಾ ದೊಡ್ಡ ದೇಶ ಕಣೋ. ಇಡೀ ಪ್ರಪಂಚದ ಬುದ್ಧಿವಂತರನ್ನ ಅದು ಆಕರ್ಷಿಸುತ್ತಲೇ ಇದೆ. ಅಲ್ಲಿನ ಫ್ರೀ ಟ್ರೇಡ್‌ನಿಂದ ಯಾವ ದೇಶಕ್ಕೆ ಲಾಭ ಆಗಿಲ್ಲ ಹೇಳು? ಇಡೀ ಪ್ರಪಂಚದ ಎಲ್ಲರೂ ಅಮೆರಿಕಾ ಕಡೆ ಸೆಳೆತಕ್ಕೆ ಒಳಗಾಗ್ತಾ ಇದಾರೆ ಅಂದ್ರೆ ಸುಮ್ಮ ಸುಮ್ಮನೇ ಆಗ್ತಾರೇನೋ? ವ್ಯಕ್ತಿ ತಾನು ಬೆಳೆಯೋದರ ಸಂಗಡ ತನ್ನ ಸುತ್ತಮುತ್ತಲಿನ ಸಮಾಜ, ನಂತರ ತನ್ನ ದೇಶ ಬೆಳೆಯೋದಿಕ್ಕೆ ನೆರವು ನೀಡ್ತಿರೋ ದೇಶವೋ ಅದು, ಬುದ್ಧಿ ಇರೋರು ಸಿಕ್ಕಿದವರು ಸಿಕ್ಕಿದಷ್ಟು ಬಾಚಿಕೊಳ್ಳುವುದಕ್ಕೆ ಅದೂ ಕಾನೂನು ಮಿತಿಯಲ್ಲಿ ಅದೊಂದೇ ದೇಶದಲ್ಲಿ ಸಾಧ್ಯ. ಎಲ್ರೂ ಯಾಕೆ ಅಮೇರಿಕಾ ಅಮೇರಿಕಾ ಅಂತ ಮುಗಿ ಬೀಳ್ತಾರೆ ಅಂತ ಯೋಚನೇನ ಎಂದಾದರೂ ಮಾಡಿದೀಯಾ?''

ಇಲ್ಲ ಅಂತ ತಲೆ ಆಡಿಸಿದೆ.

''ನಮ್ಮ ದೇಶಗಳಲ್ಲಿ ಅದೂ ನಮ್ಮಂತಹ ಬಡ ದೇಶಗಳಲ್ಲಿ ಇಲ್ಲದೇ ಇರೋದು ''ಅದೇನೋ'' ಅಲ್ಲಿದೆ. ಅದೇನೋ ಅಲ್ಲಿರೋದರಿಂದಲೇ ತಮ್ಮ ಸಾಮರ್ಥ್ಯ ತೋರಿಸುಕ್ಕೆ ಅಂತ ಜನ ಅಲ್ಲಿಗೆ ನುಗ್ತಾರೆ - ಅವರ ಬುದ್ಧಿಮಟ್ಟಕ್ಕೆ ತಕ್ಕಹಾಗೆ ಕೆಲಸ ಪಲಸ ಗಿಟ್ಟಿಸ್ಕೋತಾರೆ ಅಂದಹಾಗೆ ಅಮೇರಿಕಾ ಪಡೆದಿರೋ ಅಷ್ಟು ನೋಬಲ್ ಪ್ರಶಸ್ತಿಯನ್ನ ಬೇರೆ ದೇಶಗಳು ಪಡೆದಿಲ್ಲ ಗೊತ್ತಾ?...''

ಇದನ್ನ ಎಲ್ಲೋ ಓದಿದ್ದೆ. ಹೌದು ಅಂತ ತಲೆ ಆಡಿಸಿದೆ. ಆದರೂ ಹಿಂದೊಮ್ಮೆ ಓದಿದ್ದ ನೋಬಲ್ ಪ್ರಶಸ್ತಿ ಹೇಗೆ ವಿತರಣೆ ಆಗುತ್ತೆ ಎಂಬ ಪುಸ್ತಕದ ಕಡೆಗೆ ಅಜ್ಜಿ ಗಮನ ಹರಿಸಿದೆ. ಪುಸ್ತಕದ ಪ್ರಕಾರ ಒಂದು ರೀತಿ ಸ್ಟೇಜ್ ಮೇನೇಜ್ ಮಾಡಿ ಪ್ರಶಸ್ತಿ ಗಳಿಸಿದವನ ಕತೆ ಅದು ಅಜ್ಜಿನೂ ಆ ಪುಸ್ತಕ ಓದಿತ್ತು.

'ಸಾವಿರದಲ್ಲಿ ಒಂದು ಕೇಸು ಆ ರೀತಿ ಇರಬಹುದೇನೋ ಮಿಕ್ಕಿದ್ದು ಒಂಬೈನೂರ ತೊಂಬತ್ತೊಂಬತ್ತು ಜೆನೈನು ಅಂತ ಒಪ್ಕೊಬೇಕಾಗುತ್ತಲ್ಲಾ?...' ತಲೆ ಆಡಿಸದೇ ತೆಪ್ಪಗಿದ್ದೆ.

''ಅಮೇರಿಕಾದವರು ಕ್ಯಾಪಿಟಲಿಸ್ಟುಗಳು ಸರಿ; ಅವರು ಬೂರ್ಜ್ವಾಗಳು ಸರಿ, ಅವರು ಮೂರನೇ ಪ್ರಪಂಚದ ಬಡ ರಾಷ್ಟ್ರಗಳನ್ನ ಶೋಷಿಸ್ತಿದಾರೆ, ಸರೀನಪ್ಪ. ಆದರೂ ಇವೆಲ್ಲಕ್ಕಿಂತ ಒಂದು ವಿಭಿನ್ನವಾದ ವಿಶಿಷ್ಟವಾದ ಒಂದು ಮುಖ, ಒಂದು ನಡವಳಿ, ಒಂದು ಸಂಸ್ಕೃತಿ ಅಲ್ಲಿ ಬೆಳೆದು ಅಗಾಧವಾಗಿ ಬೇರುಬಿಟ್ಟಿದೆ. ಅದನ್ನ ಒಪ್ತೀಯಾ ತಾನೇ?'' ಅಂದಿತು ಅಜ್ಜಿ. ತೆಪ್ಪಗೆ ತಲೆ ಆಡಿಸಿದೆ.

''ಅಂತಹ ಸಂಸ್ಕೃತಿ ಅಂದರೆ ಜಗತ್ತನ್ನ ವೈಜ್ಞಾನಿಕವಾಗಿ ಉನ್ನತ ಸ್ಥಾನಕ್ಕೆ ಏರಿಸುವಂತಹ ಸಂಸ್ಕೃತಿ, ಬಡತನ ಹೊಡೆದು ಹಾಕುವಂತಹ ಸಂಸ್ಕೃತಿ, ನಿರಕ್ಷರತೇನ ಕಡಿದು ಹಾಕುವ ಸಂಸ್ಕೃತಿ ನಮಗೆ ಬೇಕೋ ಬೇಡವೋ? ನಮ್ಮ ದೇಶ ಅಮೇರಿಕಾ ಆಗಬೇಕೋ ಬೇಡವೋ?''

ನಾನು ನಿರುತ್ತರ ಆಗಿದ್ದೆ.

''ಇದು ಅವರು ಕಟ್ಟಿದ ಸ್ವರ್ಗ. ಆ ಸ್ವರ್ಗದಲ್ಲಿ ನುಗ್ಗೋದಿಕ್ಕೇನೇ ತಾನೇ ಎಲ್ಲರೂ ಪೈಪೋಟಿ ನಡೆಸ್ತಿರೋದು? ಎಲ್ಲರಿಗೂ ಅದಕ್ಕೆ ತಾನೇ ಆ ದೇಶ ಮುಕ್ತವಾಗಿರೋದು?...'ಆದರೂ ಅಜ್ಜಿ ನೀನೇನೇ ಹೇಳು. ಅದು ಮಾಡ್ತಿರೋದು ನನಗೆ ಸರಿ ಅಂತ ಕನ್‌ವಿನ್ಸ್ ಆಗ್ತಿಲ್ಲ...' ಅಂದೆ.

''ಒಂದೆರಡು ದಿವಸ ಬೇರೆ ಯಾವುದೇ ಪ್ರಿಜುಡಿಸ್‌ಗಳನ್ನ ಮನಸ್ಸಿನಲ್ಲಿ ಇಟ್ಟುಕೊಳ್ಳದೇನೇ ಮನಸ್ಸು ತಿಳಿಮಾಡಿಕೋ, ಒಂದು ವಾರ ರಜಾ ಹಾಕಿ ಚಿಂತಿಸು. ಆಮೇಲೆ ನೀನೇ ಅರ್ಥ ಮಾಡ್ಕೋತಿ. ಅಮೇರಿಕಾ ನಮಗೆ ಯಾಕೆ ಅಷ್ಟೊಂದು ಪ್ರಿಯವಾಗಿದೆ ಅಂತ...'' ಅಂತ ಹೇಳಿ ಅಜ್ಜಿ ನಕ್ಕಿತು. ತಲೆ ಪೂರ್ತಿ ಸಿಟಿಮಾರ್ಕೆಟ್ಟು ಕಲ್ಯಾಸಿಪಾಳ್ಯ, ಶಿವಾಜಿನಗರ ಅವಿನ್ಯೂರೋಡು ಇವೆಲ್ಲಾ ಒಟ್ಟಿಗೆ ತುಂಬಿಕೊಂಡು ಗೋಜಲುಗೋಜಲು ಆಗಿಬಿಟ್ಟಿತ್ತು. ಅಜ್ಜಿಯ ಲಾಜಿಕ್‌ನೆದರು ನಾನು ಒಂದು ರೀತಿ'ನಂಬ್' ಅಂತಾರಲ್ಲಾ ಹಾಗೆ ಆಗಿಬಿಟ್ಟಿದ್ದೆ. ಅಮೇರಿಕಾನ ಈತನಕ ಮ್ಯಾಪ್‌ನಲ್ಲಿ ಮಾತ್ರ ನೋಡಿದವನು ನಾನು ಆದರೆ ಅಜ್ಜಿ ಅಲ್ಲಿಗೆ ಆಗಲೇ ಎರಡು ಮೂರು ಸಲ ಹೋಗಿ ಬಂದಿರೋಳು. ಬಹುಶಃ ಅಲ್ಲಿನ ಜೀವನವನ್ನು ಹತ್ತಿರದಿಂದ ನೋಡಿರುವುದರಿಂದ, ಅಲ್ಲಿನ ಸಂಸ್ಕೃತಿಯನ್ನು ಮುಟ್ಟಿ ನೋಡಿರುವುದರಿಂದ, ಅಲ್ಲಿನ

ಜನರ 'ಪಲ್ಸ್' ಹಿಡಿದು ಗೊತ್ತಿರೋದರಿಂದ, ಆ ನೆಲದಲ್ಲಿ ಓಡಾಡಿರೋದರಿಂದ ಈ ರೀತಿಯ ಅಭಿಪ್ರಾಯಗಳಿಗೆ ಅಜ್ಜಿ ಸ್ಪಂದಿಸುತ್ತಿದ್ದಾಳೆ ಅಂತ ಅಂದ್ಕೊಂಡೆ.

''ಅದೇನು ಚಿಂತಿಸ್ತಿದ್ದೀ? ಹಸಿವಾಗಿರಬೇಕು ಮತ್ತೆ. ಒಳಗೆ ಹೋಗಿ ಅದೇನಿದೆಯೋ ತಿಂದು ಮತ್ತೆ ನಿನ್ನ ತಲೆ ತುಂಬ ಒಂದು ಹತ್ತು ಗಡಿಗೆ ಕೆಂಪು ಕೆಸರು ತುಂಬ್ಕೋ ಹೋಗು'' ಅಂತ ಚುಡಾಯಿಸಿತು ಅಜ್ಜಿ. 'ಕೆಂಪುಕೆಸರು' ಅಂದರೆ ಗೊತ್ತು ತಾನೇ? ಕಮ್ಯೂನಿಸ್ಟ್ ಐಡಿಯಾಗಳಿಗೆ ಅಜ್ಜಿ ಕೆಂಪು ಕೆಸರು ಅಂತಲೇ ಹೇಳೋದು! ನನ್ನ ತಲೇಲಿ ಕೆಂಪು ಕೆಸರು ಇದೆಯಂತೆ.

'ಅಜ್ಜೀ ನೀನೊಂದು ಮರಿ ಕ್ಯಾಪಿಟಲಿಸ್ಟು, ಸಾಮ್ರಾಜ್ಯ ಶಾಹಿಯ ಮರಿಬೊಂಬೆ ನೀನು, ಡೌನ್ ವಿತ್ ಅಜ್ಜಿ...' ಅಂತ ಮುಷ್ಟಿ ಮೇಲೆತ್ತಿ ಕೂಗು ಹಾಕಿ ರೂಮಿನಿಂದ ಹೊರಬಿದ್ದೆ! ಸರಿ ತಾನೇ ನಾನು ಮಾಡಿದ್ದು? ಯುದ್ಧದ ನೆಪದಲ್ಲಿ ಮನುಷ್ಯನನ್ನ ಮನುಷ್ಯ ಸಾಯಿಸೋದು ಅಂದರೇನ್ರೀ?



# ಮಂಡಿ

– ಗೌತಮ

'ಅದೃಷ್ಟ' ಅನ್ನೋದು ಮನೆ ಬಾಗಿಲಿಗೇ ಬರುತ್ತಂತೆ. ಎಷ್ಟೇ ಆಗಲಿ ಅದು ಅದೃಷ್ಟ ಅಲ್ಲವೇ - ನಾವು ಹೋಗಿ ಎದುರುಗೊಂಡು, ಒಳಕ್ಕೆ ಬರಮಾಡಿಕೊಳ್ಳಬೇಕು. ಆದರೆ, ಕರ್ಮ ಅಂಬೋದು? ಅದಕ್ಕೆ ಆ ಶಿಷ್ಟಾಚಾರಗಳೆಲ್ಲ ಬೇಕಾಗಿಲ್ಲ. ಸೀದ ಒಳಕ್ಕೆ ನುಗ್ಗಿಬಿಡುತ್ತೆ - ಗೂಳಿ ತರಹ. ನನಗೂ ಹಾಗೇ ಆಗಿದ್ದು. ಇಂಥ ಕರ್ಮ ನನ್ನನ್ನು ಲಬಕ್ ಅಂತ ತಬ್ಬಿಕೊಂಡುಬಿಟ್ಟಿದೆ. ಬಹುಶಃ ಅದು ಹೆಬ್ಬಾವಿನ ರೂಪದ್ದೇ ಇರಬೇಕು. ಅದೂ ಬರ್ತಾ ಬರ್ತಾ ನನ್ನ ಮಂಡೀಗೇ ಸುತ್ತಿಕೊಂಡುಬಿಟ್ಟಿದೆ. ಅದಾಗಿ ಆಗಲೇ ಹತ್ತು ವರ್ಷಗಳಾಗ್ತಾ ಬಂತು.

ಅದಾದದ್ದು ಹೀಗೆ, ಒಂದು ಫೈನ್ ಸಂಡೆ ನಡೀತಿರೋವಾಗ ಇದ್ದಕ್ಕಿದ್ದ ಹಾಗೆ ಮಂಡೀಲಿ ನೋವು ಕಾಣಿಸಿಕೊಳ್ತು. ಮಂಡಿ ನೋವು ಅಷ್ಟೇ ತಾನೇ? ಅದೇನು ಮಾಡುತ್ತೆ. ಕಾಲನ್ನ ಹಾಗೆ ಹೀಗೆ ಜೋರಾಗಿ ಎರಡು ಸಲ ಆಡಿಸಿದರೆ ಹೋಗುತ್ತೆ ಅದಕ್ಯಾಕೆ ಮಂಡೆ ಬಿಸಿ ಮಾಡಿಕೋಬೇಕು ಅಂತ ಸುಮ್ಮನಾದೆ. ಮಂಡೆ, ಟ್ಯೂಸ್‌ಡೇಗಳಾದರೂ, ನೋವು ಮಂಡೀನ ಬಿಟ್ಟು ಹೋಗೋ ಸೂಚನೆ ಕಾಣಲಿಲ್ಲ.

ನಾನು ಆಪಲ್ ತಿನ್ನದೇನೇ ಡಾಕ್ಟರಿಂದ ದೂರ ಇರಬೇಕು ಅಂತ ಹಂಬಲಿಸೋ ವ್ಯಕ್ತಿ. ಹಾಗಾಗಿ ಮನೆ ವೈದ್ಯ, ಅದೇ ಹಿತ್ತಲ ಗಿಡದ ಮದ್ದನ್ನು ಪ್ರಾರಂಭಿಸಿದೆ. ವಾಯು ನಾರಾಯಣನ ಸೊಪ್ಪು, ಗಾಳಿ ಹನುಮಂತರಾಯನ ಸೊಪ್ಪು, ಅಗ್ನಿ ಮಹೇಶ್ವರನ ಸೊಪ್ಪು, ಹೀಗೆ ಯಾವ ಯಾವುದೋ ಸೊಪ್ಪುಗಳನ್ನು ತಂದು ರುಬ್ಬಿ ಮಂಡಿಗೆ ಪಟ್ಟು ಹಾಕಿದೆ. ಫಲ? ರುಬ್ಬೋದರಲ್ಲಿ ಎಕ್ಸ್‌ಪರ್ಟ್ ಆದೆ. ಪದ್ದಿ, ನನ್ನಾಕೆ, ದೇವರಿಗೆ ಸಹಸ್ರ ವಂದನೆಗಳನ್ನು ಅರ್ಪಿಸಿರಬೇಕು - ಒಬ್ಬ ಎಕ್ಸ್‌ಪರ್ಟ್ ಗ್ರೈಂಡರ್ ಸಿಕ್ಕಿದ್ದಕ್ಕಾಗಿ.

'ಸುಣ್ಣ - ಜೇನುತುಪ್ಪ ಬೆರೆಸಿ ಬಳೀರಿ' ಅಂದರು ಒಬ್ಬರು. ಬಳಿದೆ, ಇನ್ನೊಬ್ಬರು 'ಕಾಲನ್ನು ಮಡಿಚಲೇಬೇಡಿ' ಅಂದರು. ಆದರೆ ಪ್ರಾತಃ ಪ್ರಥಮ ವಿಧಿಯನ್ನು ಪ್ರಾರಂಭಿಸುವುದು ಹೇಗೆ?

'ನೇರಳೆ ಹಣ್ಣಿನಿಂದ ಹಿಂಡಿದ ರಸ, ನಿಂಬೆ ಹಣ್ಣಿಂದ ತೆಗೆದ ರಸ ಬೆರೆಸಿ ಕುದಿಸಿ ಮಂಡಿ ಮೇಲೆ ಹುಯ್ಕೊಳ್ಳಿ' ಅಂದರು ಮತ್ತೊಬ್ಬರು. ಯಾರಾದರೂ

'ಎತ್ತು ಈಯ್ತು' ಅಂತಂದರೆ ಕೊಟ್ಟಿಗೆಗೆ ಕಟ್ಟೋ ಜಾತಿಯವನು ನಾನು. ಹಾಗಾಗಿ ಆ ಮತ್ತೊಬ್ಬರು ಹೇಳಿದ ಹಾಗೇ ಮಾಡಿದೆ. ಮಂಡೀಲಿ ಪೂರಿಗಳಂತೆ ಬೊಬ್ಬೆಗಳೆದ್ದಾಗ ಅಕ್ಕ ಪಕ್ಕದ ಮನೆಗಳವರೆಲ್ಲ ಬೆಚ್ಚಿ ಬೀಳುವಂತೆ ಬೊಬ್ಬೆ ಹೊಡೆದೆ. ಏನೋ ಆಗಿ ಹೋಯಿತು ಅನ್ನೋ ಹಾಗೆ ಒಂದೇ ಉಸಿರಿಗೆ ನಮ್ಮ ಮನೆಗೆ ಓಡಿ ಬಂದರು.

'ನಿಮಗೆ ಬುದ್ಧಿ ಇದೆಯೇನ್ರೀ?'

'ಇಂಥಾ ಪೆದ್ದು ಮುಂಡೇವು ಭೂಮಿ ಮೇಲಿವೆಯಲ್ಲಾ'

'ಗಂಡನಿಗಂತೂ ತಲೆ ಇಲ್ಲಾಂದರೆ ಹೆಂಡತೀಗಾದರೂ ಸ್ವಲ್ಪ ಇರಬೇಡವೇ?' ಅಂತ ಬಂದ ಜನ ತಮ್ಮ ತಮ್ಮ ಮನಸ್ಸಿಗೆ ತೋಚಿದಂತೆ, ಬಾಯಿಗೆ ಬಂದಂತೆ ಆಡಿಕೊಂಡರು. ಪದ್ದಿ ಹಲ್ಲು- ಹಲ್ಲು ಕಚ್ಚಿಕೊಳ್ಳುತ್ತ, ಕಣ್ಣು - ಕಣ್ಣು ಬಿಡುತ್ತ ಹಣೆ - ಹಣೆ ಚಚ್ಚಿಕೊಂಡಾಗ ಅವನತ ವದನನಾಗುವುದೊಂದೇ ನನಗುಳಿದಿದ್ದ ಏಕೈಕ ಮಾರ್ಗ. ಬಂದ ಜನ ಮಾತ್ರ ತೃಪ್ತಿಯಿಂದ ಆಡಿಕೊಂಡು ಸಂತೃಪ್ತರಾಗಿ ಹೋದರು.

ಅವರೆಲ್ಲ ಅತ್ತ ಹೋಗುತ್ತಿದ್ದಂತೆ, ಇತ್ತ ಪಿತ್ತ ನೆತ್ತಿಗೇರಿದವಳಂತೆ ಪದ್ದಿ ಶುರು ಹಚ್ಚಿಕೊಂಡಳು. 'ನೀವು ಮಾಡೋ ಪೆದ್ದು ಪೆದ್ದು ಚೇಷ್ಟೆಗಳಿಗೆ ನಾನು ಊರೋರ ಕೈಲೆಲ್ಲ ಉಗಿಸಿಕೊಳ್ಳಬೇಕಲ್ರೀ. ಎಲ್ಲ ನನ್ನ ಕರ್ಮ. ಹೇಳಿದೆ, ಗಿಣೀಗೆ ಹೇಳಿದ ಹಾಗೆ ಹೇಳಿದೆ, ಬೇಡಾರೀ, ಈ ಮನೆ ವೈದ್ಯ, ಬಚ್ಚಲ ವೈದ್ಯ, ಹಿತ್ತಲ ವೈದ್ಯ, ಲಕ್ಷಣವಾಗಿ ಆಲೋಪತಿ ಮೆಡಿಸನ್ ತಗೊಳ್ಳಿ ಅಂತ! ಕೇಳಿದಿರಾ? ಈಗ ನೋಡಿ' 'ಆಯ್ತು ಮರಾಯ್ತಿ. ನಾಳೇನೇ ತೋರಿಸ್ತೀನಿ' ಅಂದೆ, ಶರಣಾದೆ.

ಡಾ|| ಪುನೀತ್ ಶೆಟ್ಟಿ MBBS, MD, FRCS, FRDS ಅಂತ ಇನ್ನೂ ಏನೇನೋ ಅಕ್ಷರಗಳು ಸ್ಸಾರೀ, ಡಿಗ್ರೀಗಳು. ಅಪಾಯಿಂಟ್‌ಮೆಂಟ್ ತೊಗೊಂಡೇ ಹೋದೆ. ಸಂತ ತುಕಾರಾಂ ಸಿನಿಮಾದಲ್ಲಿ ಸುತ್ತಿಯಿಂದ ತಲೆ ಮೇಲೆ ಹೊಡೆದು ಮಡಕೆ ಬೆಂದಿದೆಯೋ ಇಲ್ಲವೋ ನೋಡೋ ಹಾಗೆ ಆ ಡಾಕ್ಟರು ನನ್ನ ಮಂಡಿ ಮೇಲೆ ಬಾರಿಸಿದರು. ಟ್ವಿಸ್ಟು, ಬ್ರೇಕು ಎಲ್ಲ ಮಾಡಿಸಿದರು. 'ನಥಿಂಗ್ ಟು ವರೀ' ಅಂತಂದರು. ಒಂದು ರಾಶಿ ಔಷಧಿ ಬರೆದುಕೊಟ್ಟರು. ಊಟದಲ್ಲಿ ನಾಲ್ಕು ತುತ್ತು ಕಡಿಮೆ ಮಾಡಿಕೊಂಡು ಔಷಧಕ್ಕೆ ಜಾಗ ಮಾಡಿಕೊಂಡೆ. ಒಂದು ತಿಂಗಳು ತಪ್ಪದೆ ಸೇವಿಸಿದೆ. ಯಾವುದೇ ಗುಣವೂ ಕಂಡುಬರಲಿಲ್ಲ. ಡಾಕ್ಟರು 'ಡೋಂಟ್ ವರೀ' ಅಂತಂದರು. ಜಿಮ್ನಾಷಿಯಂ ತರಹದ ಒಂದು ರೂಮಿಗೆ ಕರೆದುಕೊಂಡು ಹೋಗಿ ಥೆರಪಿ ಅಂತ ಏನೇನೋ ಹೇಳಿಕೊಟ್ಟರು ಒಂದು ತಿಂಗಳು ಅವನ್ನೂ

ಮಾಡಿದೆ. ಮಂಡಿ ನೋವು ಜಾಸ್ತಿಯಾಯಿತೇ ಹೊರತು ಕಮ್ಮಿಯೇನೂ ಆಗಲಿಲ್ಲ. ಮೇಣ ಕಾಯಿಸಿ ಮಂಡಿ ಮೇಲೆ ಸುರಿಯೋ ಚಿಕಿತ್ಸೆ ನೀಡಿದರು. ಊಹುಂ. ಪ್ರಯೋಜನವಾಗಲಿಲ್ಲ. ಎಲೆಕ್ಟ್ರಿಕ್ ಟ್ರೀಟ್‌ಮೆಂಟ್ ಕೊಟ್ಟರು. 'ಒಂದು ವಾರ ಬಿಟ್ಟು ಬನ್ನಿ' ಅಂದರು ನಾನು ಹೋಗಲಿಲ್ಲ.

'ಪದ್ದೀ' ಅಂದೆ ಮುಯ್ಯಿ ತೀರಿಸಿಕೊಳ್ಳೋ ಬಯಕೆಯಿಂದ. ಅದಕ್ಕೆಲ್ಲಿ ಅವಕಾಶ ಕೊಡ್ತಾಳವಳು? 'ರೀ, ಯಾವುದಕ್ಕೂ ನಂಬಿಕೆ ಅನ್ನೋದೊಂದಿರಬೇಕು. ಅದಿಲ್ಲದಿದ್ದ ಮೇಲೆ ಯಾವ ಪಥೀ ಆದರೂ ಒಂದೇ. 'ತಿರುಪತಿ' ಅಂದುಬಿಟ್ಟಳು. ಮುಂದಕ್ಕೆ ನಾನೇನು ತಾನೇ ಮಾತಾಡಲಿ?

'ಆಯ್ತು. ನೀನು ಹೇಳಿದಂತೆ ಆಲೋಪತಿ ಆಯ್ತು. ಮುಂದೇನು ಮಾಡೋಣ? ಆಯುರ್ವೇದಕ್ಕೆ ಹೋದರೆ?' 'ಯಾವುದೋ ಒಂದು ವೇದ. ಅಲ್ಲೀನೂ ಒಂದಷ್ಟು ಸುರೀರಿ. ನನ್ನ ಹಣೇಲಿ ಇನ್ನೂ ಏನೇನು ಬರೆದಿದೆಯೋ? ಅಂದಳು. ಅನುಭವಿಸ್ತಿರೋನು ನಾನು, ಬರೆದಿರೋದು ಅವಳ ಹಣೆ ಮೇಲಂತೆ, ನೋಡಿ ಹೇಗಿದೆ.



ಆ ಚೂರ್ಣ, ಈ ಲೇಪ್ಯ, ಆ ತೈಲ, ಇದೂ ಮಾತ್ರ ಕೊಟ್ಟು ಕಾಫೀ ಕುಡಿಬೇಡಿ, ಟೀ ಕುಡಿಬೇಡಿ, ದಿನಕ್ಕೆ ಹನ್ನೆರಡು ಲೀಟರ್ ನೀರು ಕುಡೀರಿ, ಹುಣಿಸೆಬೀಜ, ಬೇಯಿಸಿದ ಬದನೆಕಾಯಿ ಆಲೂಗೆಡ್ಡೆ ತಿನ್ನಬೇಡಿ ಇತ್ಯಾದಿತ್ಯಾದಿತ್ಯಾದಿ ಒಂದೂವರೆ ಕಿಲೋಮೀಟರ್ ಉದ್ದದ ಪಥ್ಯ ಹೇಳಿದರು. ಅವನ್ನೆಲ್ಲ ನೆನಪಿನಲ್ಲಿಟ್ಟುಕೊಳ್ಳೋಕೆ ಸುಲಭ ಆಗಲಿ ಅಂತ ಇನ್ನೊಂದು ಲೇಪ್ಯ ಕೊಟ್ಟರು. ಇವನ್ನೆಲ್ಲ ಒಂದು ಚಾರ್ಟ್‌ನಲ್ಲಿ ಬರೆದು ಅದರಂತೆ ಫಾಲೋ ಮಾಡೋದೇ ಒಂದು ದೊಡ್ಡ ಉದ್ಯೋಗವಾಯಿತು. ಚಾಚೂ ತಪ್ಪದೆ ಅದರಂತೆ ನಡೆದುಕೊಳ್ಳುವುದರಲ್ಲಿ ಒಂದು ತಿಂಗಳು ಕಳೆದದ್ದೇ ಗೊತ್ತಾಗಲಿಲ್ಲ. ಆದರೆ ಮಂಡಿ ಮಾತ್ರ 'ನನಗ್ಯಾಕೆ ಹೀಗೆ ಚಿತ್ರಹಿಂಸೆ ಕೊಡ್ತಿದೀರ?' ಅಂತ ಗೋಳಾಡೋದು ಜಾಸ್ತಿ ಆಯಿತು. ಅದನ್ನ ಕೇಳೋಕಾಗದೆ ಆಯುರ್ವೇದಕ್ಕೆ ಇತಿಶ್ರೀ ಹಾಡಿದೆ.

ಹೋಮಿಯೋಪಥೀನೂ ಟ್ರೈ ಮಾಡಿಬಿಡೋಣ ಅಂತ ನಿರ್ಧರಿಸಿದೆ. ಬಿಳೀ ಗುಳಿಗೆಗಳನ್ನ ಕೊಟ್ಟರು ಚಪ್ಪರಿಸೋಕೇಂತ. ಕಾಫಿ ಟೀನ ಕಣ್ಣಲ್ಲೂ ನೋಡಬಾರದು ಅಂದರು. ಮೂರೇ ದಿನ. ಎದ್ದರೆ ಕೂರೋಕಾಗದು, ಕೂತರೆ ಏಳೋಕಾಗದು, ಯಮಬಾಧೆ. ಪದ್ದೀನ್ನೇ ಕಳಿಸಿಕೊಟ್ಟೆ ಡಾಕ್ಟರ್ ಹತ್ತಿರ - ನಾನು ಹೋಗಲಾಗದೆ, 'ಮೊದಲು ಮೊದಲು ಹಾಗೆ ಅಂತೇರೀ. ಉಲ್ಬಣಿಸುತ್ತಂತೆ. ಆಮೇಲೆ ಕ್ರಮೇಣ ಕಮ್ಮಿ ಆಗುತ್ತಂತೆ' ಅಂತಂದಳು. ಊನ ಆಗೋದು ಬೇಡಾಂತ ಹೋಮಿಯೋ ಪಥೀಗೂ ಸಲಾಂ ಹೇಳಿದ್ದಾಯ್ತು.

ಕಾಲು ಬಿದ್ದೇ ಹೋಯ್ತು ಅನ್ನೋ ಭಾವನೆ ಬಂತು. ಮನಸ್ಸಿನ ತುಂಬ ತುಂಬಿಕೊಂಡಿತು. ಆಗಲೇ ಅಲ್ಲವೇ ವೇದಾಂತ ಉದಯಿಸೋದು? ಎಂಥೆಂಥವರೋ ಏನೇನನ್ನೋ ಕಳಕೊಂಡಿದ್ದಾರೆ. ಇನ್ನು ನಾನು ಯಾವ ಮಹಾ. ನನ್ನಂಥೋನ ಮಂಡಿ ಯಾವಲೆಕ್ಕ? ಈ ವೇದಾಂತ ಮನಸ್ಸನ್ನು ಹಗುರ ಮಾಡಿತು. ಮಂಡಿಯೇ ಇಲ್ಲದಿದ್ದರೂ ಚಿಂತೆಯಿಲ್ಲ ಅಂತನ್ನಿಸಿದಾಗ ನಿರಾತಂಕವಾಯಿತು.

ಕರೆಗಂಟೆ ಶಬ್ದವಾಯಿತು. ಪದ್ದಿ ಬಾಗಿಲು ತೆಗೆದದ್ದೂ ತಿಳಿಯಿತು. ಬಂದವರು ಎದುರುಮನೆ ಸಾಸಿವೆ ಸಾವಿತ್ರಮ್ಮ. ಮಾತು ಆಡ್ತಾ ಆಡ್ತಾ ನನ್ನ ಕಡೆ ಹೊರಳಿತು. ಅದಕ್ಯಾಕೆ ಯೋಚನೆ ಮಾಡ್ತೀರ ಪದ್ದಮ್ಮನೋರೇ. ಆ ಆಂಜನೇಯ ಗುಡಿ ಪಕ್ಕ ಒಂದು ಟೆಂಟ್ ಎದ್ದಿದೇರೀ. ಇಂಥಾವಕ್ಕೆಲ್ಲ ಯಾವ್ಯಾವುದೋ ಪ್ರಾಣಿಗಳಿಂದ ತೆಗೆದ ಎಣ್ಣೆ ಔಷಧಿ ಕೊಡ್ತಾನೇರೀ'.

'ಏನು ಪ್ರಾಣಿಗಳು ಸಾವಿತ್ರಮ್ಮಾ?'

'ನವಿಲು, ಕಾಗೆ, ಗುಬ್ಬಚ್ಚಿ, ಕೋಳಿ, ಗೂಬೆ, ಹದ್ದು ಅಂತ ಇನ್ನೂ ಏನೇನೋ ಪಕ್ಷಿಗಳ ಚಿತ್ರಗಳ್ನ ಹಾಕ್ಕೊಂಡಿದಾನೆ. ಬೇಕಾದಷ್ಟು ಜನಕ್ಕೆ ವಾಸಿಯಾಗಿದೆಯಂತೇರೀ'

'ಹೌದೇ' ಅಂದಳು ಪದ್ದಿ ಆಶ್ಚರ್ಯದಿಂದ. ಮಲಗಿದಲ್ಲಿಂದಲೇ ನಾನೂ 'ಹೌದೇ' ಅಂದಿದ್ದೆ.

ಮಾರನೇ ದಿನ ರಿಕ್ಷಾ ಹತ್ತಿ ಅಲ್ಲಿಗೆ ಹೋದೆವು. 'ಬನ್ನಿ ಬನ್ನಿ' ಅಂದದ್ದು ಕೇಳಿಸಿತು. ಟೆಂಟ್ ಒಳಗೆ ಒಬ್ಬ ಎಳೇ ಮುದುಕ. ಮುದುಕನ ಮುಂದೆ ಒಬ್ಬ ಪೇಷೆಂಟು. ಸುತ್ತಲೂ ಬರೀ ಬಾಟಲುಗಳೇ, ಎಲ್ಲದರಲ್ಲೂ ಒಂದೇ ಬಣ್ಣದ (ಕಪ್ಪು) ಔಷಧಗಳು, 215, 327, 458 ಅಂತ ಅರ್ಥವಾಗದ (ನನಗೆ) ಸಂಖ್ಯೆಗಳು ಅಲ್ಲಲ್ಲಿ ನಾಮಫಲಕಗಳು.

''ಗುಣವಾದ ಮೇಲೇ ಹಣ''

''ಯಾವುದೇ ಕಾಯಿಲೆಯಿದ್ದರೂ ಚಿಂತಿಸಬೇಡಿ''

''ಗಂಡಾಗಿರಿ, ಹೆಣ್ಣಾಗಿರಿ, ವಯಸ್ಸಂತೂ ಏನಾದರಾಗಿರಲಿ ಯೋಚನೆ ಬಿಟ್ಟು ನಿಶ್ಚಿಂತರಾಗಿರಿ.''

ಇನ್ನೊಂದು ಕಡೆ ಹೋಟೆಲಿನಲ್ಲಿನ ಮೆನುಬೋರ್ಡ್ ತರಹ, ಅದಕ್ಕಿಂತ ಉದ್ದವಾದ ಬೋರ್ಡು. 'ಪಿತ್ತ, ವಾತ, ಬೆನ್ನುನೋವು, ಮಂಡಿನೋವು, ಹೊಟ್ಟೆ ಉರಿ, ತಲೆಶೂಲೆ, ನೆಗಡಿ, ಕ್ಷಯ, ರಕ್ತದೊತ್ತಡ, ಮಧುಮೇಹ, ಗುಪ್ತರೋಗಗಳು, ಮೂಲವ್ಯಾಧಿ, ಚರ್ಮರೋಗಗಳು... ಓದ್ತಿದ್ದ ಹಾಗೇ ತಲೆ ಸುತ್ತಿಬಂತು. ಅಷ್ಟರಲ್ಲಿ ತನ್ನ ಕೈಯ್ಯಳತೆಯಲ್ಲೇ ಇದ್ದ ಔಷಧಗಳನ್ನ ಡಿಸ್ಪೆನ್ಸ್ ಮಾಡಿ ಒಂದು ಬಾಟಲನ್ನು ಕೊಟ್ಟ. ಆ ರೋಗಿ ಅದನ್ನು ತೊಗೊಂಡೂ ಹೋದ. ನನ್ನ ಸರದಿ ಬಂತು. ಮಂಡಿ ನೋವಿನ ಚರಿತ್ರೆ ಬಿಚ್ಚಿಟ್ಟೆ. ದೊಡ್ಡದಾಗಿ ನಕ್ಕ ನನ್ನನ್ನು ಹುಚ್ಚ ಎಂದ. ಬುದ್ದು ಎಂದ. ಮುಂಚೇನೇ ಬಂದಿದ್ದಿದ್ದರೆ ಇಷ್ಟು ಹೊತ್ತಿಗೆ ಮಂಡಿನೋವು ಯಾವಾಗಲೋ ಮಾಯವಾಗಿಬಿಟ್ಟಿರ್ತಿತ್ತು ಎಂದ. ಇದ್ದಕ್ಕಿದ್ದಂತೆ ಗಂಭೀರನಾದ. 'ಬೇಜಾರು ಮಾಡಿಕೋಬೇಡಿ. ಈ ಮಂಡಿ ನೋವಿಗೆ ನಾವು ಸ್ಪೆಷಲಿಸ್ಟು, ಮೂರೇ ದಿನದಲ್ಲಿ ಮಂಡಿ ಮಾಯ ಆಗಿಬಿಡುತ್ತೆ' ಅಂದ. ನಾನು ಬೆಚ್ಚಿದ್ದನ್ನ ಗಮನಿಸಿ 'ಮಂಡಿ ನೋವು' ಅಂತ ತಿದ್ದಿದ. ಪವಾಡ ಅನ್ನಿಸಿತು. ಆನಂದತುಂದಿಲನಾದೆ. ಪದ್ದಿ ಕಡೆ ನೋಡಿದೆ. 'ನಮ್ಮ ಪಾಲಿಗೆ ದೇವರು ಇದಾನೇರೀ' ಅಂದಳು. 'ಆಯ್ತು ಕೊಡಿ' ಅಂದೆ. 'ಸ್ವಲ್ಪ ಹೊತ್ತಿರಿ' ಅಂದ.

ಸುಮ್ಮನೆ ಕೂತೆ. ಆ ಮುದುಕನೂ ಸುಮ್ಮನೆ ಕೂತಿದ್ದ. ಔಷಧೀನ ತಯಾರಿಸಬೇಕೇನೋ ಅಂದುಕೊಂಡೆ ಆದರೆ ಆ ಥರ ಕಾಣಿಸಲಿಲ್ಲ. ಇನ್ನೊಬ್ಬ ಪೇಷೆಂಟ್ ಬಂದ. ತಲೇಲಿ ಕೂದಲುದುರುತ್ತೆ ಅಂತ. 'ಗುಂಡು ಹೊಡೆಸಿ ಈ ತೈಲ ಹಚ್ಚಿ' ಅಂತ ಅವನಿಗೆ ತೈಲ ಕೊಟ್ಟ. ಮತ್ತೊಬ್ಬ ಬಂದ. 'ಅತಿಯಾಗಿ ತಿಂದರೆ ಹೊಟ್ಟೆ ನೋವು ಬರುತ್ತೆ' ಅಂದ. 'ಮಿತವಾಗಿ ತಿನ್ನಿ' ಅಂತ ಪಥ್ಯ ಹೇಳಿ ಇನ್ನೆಂಥದೋ ಔಷಧಿ ಕೊಟ್ಟು ಕಳಿಸಿದ. ನಾನು ಮಾತ್ರ ಹಾಗೇ ಕೂತಿದ್ದೆ. 'ಕೊಡ್ತೀರಾ?' ಅಂದೆ 'ಸ್ವಲ್ಪ ಇರೀ' ಅಂತ ಅದೇ ರಾಗ ಇನ್ನು ಅರ್ಧ ಗಂಟೆ ಕೂತೆ ಮುದುಕ ಏಳೋ ಹಾಗೆ ಕಾಣಲಿಲ್ಲ. 'ಯಾಕೆ ಸ್ವಾಮಿ ಹೀಗೆ ಕಾಯಿಸ್ತಾ ಇದ್ದೀರ? ಔಷಧ ಸ್ಟಾಕ್ ಇಲ್ಲವೇ?' ಅಂತ ಕೇಳಿದೆ.

'ನಿಮ್ಮ ಔಷಧ ಮೇಲಿದೆ. ನನ್ನ ಕೈಗೆ ಎಟುಕೋಲ್ಲ. ಹಾಳಾದೋನು ಆ ಭೋಲಾ ಎಲ್ಲಿ ಹೋದನೋ. ಅವನು ಬಂದ ತಕ್ಷಣ ಕೊಟ್ಟುಬಿಡ್ತೀನಿ' ಅಂದ.

'ಅದೆಷ್ಟು ಹೊತ್ತಿಗೆ ಬರ್ತಾನೋ ಏನೋ. ನೀವೇ ಎದ್ದು ಕೊಡಬಾರದೇ ಸ್ವಾಮಿ?' ಅಂತ ಗೋಗರೆದೆ. 'ನನ್ನ ಕೈಲಿ ಆಗೋ ಹಾಗಿದ್ದಿದ್ರೆ ನಿಮ್ಮನ್ನ ಪಾಪ, ಇಷ್ಟು ಹೊತ್ತು ಯಾಕೆ ಕಾಯಿಸ್ತಿದ್ದೆ?'

ಪಾಪ ಹುಟ್ಟು ಕುಂಟ 'ಲೊಚ್' ಅಂದೆ. 'ಹುಟ್ಟಿದಾಗಲೇ ಕಾಲಿರಲಿಲ್ವೇ?' ಅಂತ ಕನಿಕರದಿಂದ ಕೇಳಿದೆ ಮುದುಕ ದಿಗ್ಭ್ರಮೆಗೊಂಡವನಂತೆ ಹೇಳಿದ 'ಅಯ್ಯಯ್ಯೋ ಹಾಗೇನಿಲ್ಲ ಎರಡೂ ಕಾಲುಗಳಿವೆ'

'ಮತ್ತೆ? ಏನಾಯ್ತು?' ಕೇಳಿದೆ ಗ್ರೈಪ್ ವಾಟರ್ ಅಜ್ಜಿ ಥರ.

'ಯಾಕೆ ಹೇಳ್ತೀರ ರಾಯರೇ. ಎರಡು ವರ್ಷ ಆಯ್ತು - ಈ ಮಂಡಿ ಹಿಡುಕೊಂಡು ಯಾವ ಜನ್ಮದ ಕರ್ಮವೋ' ಅಂದ.

ಆ ಮಾತು ಕೇಳ್ತಿದ್ದ ಹಾಗೇ ನನಗೇನಾಯಿತೋ ಏನೋ, ಧಡಕ್ಕನೆದ್ದೆ. ನೇರವಾಗಿ ನಿಂತೆ. ಒಳ್ಳೆ ಸಿಪಾಯಿಯ ಥರ ಲೆಫ್ಟ್-ರೈಟ್ ಅಂತ ಬಾಯಲ್ಲಿ ಹೇಳದೆಯೇ ಟಕಟಕಾಂತ ನಡೆಯುತ್ತ ರಸ್ತೆಯವರೆಗೂ ಬಂದೇಬಿಟ್ಟೆ. ಚಪ್ಪಾಳೆ ತಟ್ಟಿ ಆಟೋ ನಿಲ್ಲಿಸಿ ಹತ್ತಿ ಕುಳಿತೆ. ಪದ್ದಿ ನನ್ನ ಸಮಕ್ಕೆ ನಡೆಯಲಾಗದೆ ಓಡೋಡಿ ಬಂದು ರಿಕ್ಷಾ ಹತ್ತಿದಳು.

ಮಂಡಿ ನೋವು ಅದ್ಯಾವ ಮಾಯದಲ್ಲಿ ಮಾಯವಾಗಿತ್ತೋ ಆ ಪರಮಾತ್ಮನಿಗೇ ಗೊತ್ತು!

# ಗ್ರಹ-ಚಾರ!!

– ಪ್ರಕಾಶ್

''ಜ್ಯೋತಿಷ್ಯ ಶಾಸ್ತ್ರವನ್ನು ವಿಶ್ವವಿದ್ಯಾಲಯಗಳಲ್ಲಿ ಬೋಧನೆಗೆ ಯೋಜನೆಗಳು''

ಸುದ್ದಿ

''ಏನ್ರೀ, ನಿಂ ಪ್ರಾಜೆಕ್ಟ್ ಬಗ್ಗೆ ಏನು ಯೋಚನೆ ಮಾಡಿದೀರ? ಯಾವ ಫ್ಯಾಕ್ಟರೀಗೆ ಹೋಗೋಣ ಅಂತಿದೀರ? ಈಗಾಗಲೇ ನನಗೆ ಪ್ರೋಟೋಕಾಲ್ ಕೊಡಬೇಕಿತ್ತು!'' ಎಂಜಿನಿಯರಿಂಗ್ ಕಾಲೇಜಿನ ಪ್ರಾಧ್ಯಾಪಕರು ಏರಿದ ದನಿಯಲ್ಲಿ ಕೇಳಿದರು. ಸುದರ್ಶನ ನಿಧಾನವಾಗಿ ಉತ್ತರಿಸಿದ. ''ಸಾರ್, ಈ ಪ್ರಾಜೆಕ್ಟ್ ಬಗ್ಗೆ ಆರಂಭ ಮಾಡೋಣ ಅಂತ ಲೈಬ್ರೆರಿಗೆ ಹೋದೆ. ಇನ್ನೇನು ರೆಫೆರೆನ್ಸ್ ಶುರು ಮಾಡಬೇಕು ಅಂತಿದ್ದಾಗ, ನನ್ನ ಸ್ನೇಹಿತ ಶಾಸ್ತ್ರಿ ಬಂದ. ನನ್ನ ಮುಖವನ್ನೇ ದುರುಗುಟ್ಟಿ ನೋಡಿದ. ಶಾಸ್ತ್ರಿ ಜ್ಯೋತಿಷ್ಯ ಶಾಸ್ತ್ರದ ಫೈನಲ್ ವರ್ಷದ ವಿದ್ಯಾರ್ಥಿ. 'ಲೋ, ಇವತ್ತು ಪ್ರಾಜೆಕ್ಟ್ ಶುರು ಮಾಡಬೇಡ! ಮುಂದಿನ ಸೋಮವಾರ ಹತ್ತು ಗಂಟೆ ಪ್ರಶಸ್ತವಾಗಿದೆ. ಈಗ ನೀನು ಏನು ಶುರು ಮಾಡಿದರೂ ನೀರಿನಲ್ಲಿ ಹೋಮ ಮಾಡಿದ ಹಾಗೆ' ಅಂದ. ಸಾರ್, ನನಗೆ ಯಾಕೋ ಭಯ ಆಯ್ತು!'' ಪ್ರಾಧ್ಯಾಪಕರು ಆಕಾಶದ ಕಡೆ ನೋಡಿ ನಿಟ್ಟುಸಿರು ಬಿಟ್ಟರು. ಸುದರ್ಶನ ಸುಮ್ಮನಿದ್ದರೆ ಚೆನ್ನಾಗಿತ್ತು. ಆದರೆ ವಿಷಘಳಿಗೆ! ಕೇಳೇ ಬಿಟ್ಟ ''ಗ್ರಹಗಳು ಯವುದಾದರೂ ಕಾಣುತ್ತವೆಯೇ ಸಾರ್?'' ಎಂಜಿನಿಯರಿಂಗ್ ವಿದ್ಯಾರ್ಥಿಯೊಬ್ಬನನ್ನು ಪ್ರಾಧ್ಯಾಪಕರು ಬೆನ್ನಟ್ಟಿ ಓಡುತ್ತಿರುವ ದೃಶ್ಯ ನಿಜವಾಗಿಯೂ ನಯನ ಮನೋಹರವಾಗಿತ್ತು!!

★★★

ನಗರದ ಆಸ್ಪತ್ರೆಯ ತುರ್ತು ಚಿಕಿತ್ಸಾ ವಿಭಾಗ. ರೋಗಿಗೆ ಹಾರ್ಟ್ ಅಟ್ಯಾಕ್ ಆಗಿ ಅಡ್ಮಿಟ್ ಆಗಿದಾನೆ. ಸೂಕ್ತ ಇಂಜೆಕ್ಷನ್ ಕೂಡಲೇ ಕೊಡಬೇಕು, ಇಲ್ಲದಿದ್ದರೆ ಸೀರಿಯಸ್ ಆಗುತ್ತೆ ಅಂತ ಡಾಕ್ಟರು ಹೇಳಿದರು, ಆ ಇಂಜೆಕ್ಷನ್ ದುಬಾರಿಯಾದ್ದರಿಂದ ಸಂಬಂಧಿಕರಿಗೆ ಮೊದಲು ಹೇಳಿ, ನಂತರ ಚಿಕಿತ್ಸೆ ಮಾಡುವುದು ವಾಡಿಕೆ. ರೋಗಿಯ ಹಿರಿಯ ಪುತ್ರ ಬಂದ. 'ಡಾಕ್ಟ್ರೆ, ಆ ಇಂಜೆಕ್ಷನ್ ಕೊಡಲೇಬೇಕು! ಹಣದ ಪ್ರಶ್ನೆ ಅಲ್ಲವೇ ಅಲ್ಲ! ಆದರೆ, ಇನ್ನು ಒಂದೂವರೆ ಗಂಟೆ

ಆದಮೇಲೆ ಕೊಡಬೇಕು! ಆವಾಗಲೇ ಅದರ ಎಫೆಕ್ಟ್ ಬಹು ಚೆನ್ನಾಗಿರೋದು' ಅಂದ.



'ನಾನು ಅಸ್ಟ್ರಾಲಜಿ ಪಿ.ಹೆಚ್.ಡಿ.!' ಅಂತಾನೂ ಸೇರಿಸಿದ. ಡಾಕ್ಟರಿಗೆಲ್ಲ ಎದೆ ಜಗ್ಗೆಂದಿತು. ಸೀನಿಯರ್ ಡಾಕ್ಟರ್ ರೇಗಿದರು. ''ಅಲ್ರೀ, ಸ್ಟ್ರೆಪ್ಟೋ ಕೈನೇಸ್ ಬೇಗ ಕೊಟ್ಟಷ್ಟೂ ಒಳ್ಳೆಯದು ಅಂತ ಸಾವಿರಾರು ವಿಜ್ಞಾನಿಗಳು ಸಂಶೋಧನೆ ಮಾಡಿದಾರೆ! ನಿಧಾನ ಮಾಡಿ ಪ್ರಯೋಜನವಿಲ್ಲ! ನಿಧಾನಮಾಡಿ ರೋಗಿಗೆ ಏನಾದರೂ ಕಾಂಪ್ಲಿಕೇಶನ್ ಆದ್ರೆ ಅದಕ್ಕೆ ನಾನೇ ಜವಾಬ್ದಾರಿ ಅಂತ ಚಾರ್ಟಿನಲ್ಲಿ ಸೈನ್ ಮಾಡಿ'' ಎಂದರು. ರೋಗಿಯ ಸಂಬಂಧಿಗಳಲ್ಲಿ ಒಡಕು ಉಂಟಾಯಿತು! ಒಂದು ಪ್ರೋ-ಅಸ್ಟ್ರಾಲಜಿ, ಇನ್ನೊಂದು Anti-group ಹಿರಿಯ ವೈದ್ಯರೊಬ್ಬರು ರೋಗಿಯ ಹತ್ತಿರ ಬಂದು, ವಿಷಯ ಸೂಕ್ಷ್ಮವಾಗಿ ಹೇಳಿದರು. ಆ ರೋಗಿ ಜಾಣ! 'ಅಯ್ಯೋ, ನನ್ನ ಮಗನ ಮಾತೇನು ಕೇಳೋದು? ನೀವು ಬೇಕಾದ್ದು ಮಾಡಿ! ಅವನೋ, ಹುಟ್ಟಿದ್ದೇ ರಾಹುಕಾಲದಲ್ಲಿ!!' ಅಂತ ನಕ್ಕರು. ಸದ್ಯ, ಚಿಕಿತ್ಸೆಯಾಗಿ ರೋಗಿ ಗುಣಮುಖವಾದರು!

★★★

ದೇವೇಂದ್ರ ಚಿಂತಾಕ್ರಾಂತನಾಗಿ ಕೂತದ್ದ. ಬೇಹುಗಾರ ದೇವತೆಗಳು ಹೇಳಿದ ಸುದ್ದಿ ಭಯಾನಕವಾಗಿತ್ತು. ಭಾರತವೆಂಬ ಸಣ್ಣ ಪ್ರದೇಶದ ದಕ್ಷಿಣದಲ್ಲಿ, ಗ್ರಹಗತಿಗಳನ್ನ ವೈಜ್ಞಾನಿಕವಾಗಿ ಸಂಶೋಧಿಸುತ್ತಾರಂತೆ! ಇದರಿಂದ ಏನೇನು ಪ್ರಳಯಕಾಲ ಬರುತ್ತೋ ಅಂತ ದೇವತೆಗಳು ಗಾಬರಿಗೊಂಡರು. ವಿಷಯವನ್ನೆಲ್ಲ ಸೂಕ್ಷ್ಮವಾಗಿ ವಿವೇಚಿಸಿ ನೋಡಿದರು. ನಂತರ ದೇವೇಂದ್ರ ಹಸನ್ಮುಖನಾದ! ಹೆದರಬೇಡಿ! ಈ ಸಂಶೋಧನೆಗಳನ್ನ ಮಾಡಬೇಕೆ, ಇಲ್ಲವೆ ಎಂದು ವಿವಾದ ಹುಟ್ಟಿದೆ. ಅದು ನಿರ್ಣಾಯವಾಗುವ ಹೊತ್ತಿಗೆ ಹಲವಾರು ಶತಮಾನಗಳಾಗುತ್ತವೆ! ಚೂಟಿ ಜೂನಿಯರ್ ದೇವತೆಯೊಬ್ಬ, 'ದೇವಾಧಿ ದೇವ! ಒಂದು ಪ್ರಶ್ನೆ ಕೇಳಬಹುದೇ?' ಎಂದ. ದೇವೇಂದ್ರ ಅವನ ಕಡೆ ನೋಡಿದ, 'ಪ್ರಭು, ಮಾನವರು ನಮ್ಮ ಕಂಟ್ರೋಲಿನಲ್ಲಿದ್ದರೆ, ಅವರು ಮಾಡುವ ಸಂಶೋಧನೆಗಳಿಗೆ ನಾವು ಏಕೆ ಆತಂಕ ಪಡಬೇಕು? ಯಃಕಚಿತ್ ಮಾನವ ಗ್ರಹಗತಿ ಬದಲಾಯಿಸಲು ಸಾಧ್ಯವೇ?' ದೇವೇಂದ್ರನಿಗೆ ನಖಶಿಖಾಂತ ಕೋಪ ಉಕ್ಕಿತು. ಶಾಪ ಕೊಟ್ಟೇಬಿಟ್ಟ! ''ನೀನು ದಕ್ಷಿಣ ಭಾರತದಲ್ಲಿ ಹುಟ್ಟಿ, ಜ್ಯೋತಿಷ್ಯ ಶಾಸ್ತ್ರದಲ್ಲಿ ಪಿ.ಹೆಚ್.ಡಿ. ಮಾಡಬೇಕು!'' ನೆರೆದಿದ್ದವರೆಲ್ಲ ಗಡ ಗಡ ನಡುಗಿದರು.

★★★



# ನಿಮಗಿದು ಗೊತ್ತಿತ್ತೇ?

**ಕಮಲಾ ರಾಮಸ್ವಾಮಿ**

ಬೆಳಿಗ್ಗೆ ಎದ್ದಾಗಲೇ ನನ್ಗನ್ನಿಸ್ತು - ಇವತ್ತು ಯಾಕೋ ಸರಿಯಿಲ್ಲ ಅಂತ! ಬೆಳಿಗ್ಗೆ 5½ ಗಂಟೆಗೆಲ್ಲಾ ಪಕ್ಕದ್ಮನೆ ಕೆಲ್ಸದೋಳು ಜೋರಾಗಿ ಬೆಲ್ ಮಾಡ್ದಾಗ, ಧಢಕ್ ಅಂತ ನಾನೆದ್ದು ಮುಗ್ಗರ್ಸಿದಾಗ್ಲೆ ಅನ್ಕೊಂಡೆ, ಶಕುನ ಸರ್‍ಯಾಗಿಲ್ಲ ಅಂತ.

''ಪಕ್ಕದ ಮನ್ಯೋರು ಎಲ್ಗೆ ಹೋಗಿದ್ದಾರೆ? ನಿಮ್ಗೆನಾದ್ರೂ ಹೇಳಿದ್ರಾ'' ಎಂದು ಅವಳೆಂದಳು.

''ನಂಗೊತ್ತಿಲ್ಲ ಹೋಗಿ'' ಎಂದು ಹೇಳಿ ಟಪ್ ಎಂದು ಬಾಗಿಲು ಮುಚ್ಚಿ ತಿರ್ಗಿ ಬಂದು ಮಲಗಿದೆ. ಅದ್ಯಾವಾಗ ನಿದ್ದೆ ಹತ್ತಿತ್ತೋ ತಿಳೀದು. ಎದ್ದಾಗ ಏಳಾಗಿತ್ತು. ಶುರುವಾಯ್ತು ''ತೂಫಾನ್-ಮೇಲ್'' ತರಹ ಕೆಲ್ಸ. ಮನ್ಯೋರೆಲ್ಲಾ ಎಷ್ಟು ಹೊತ್ತಿಗೆ ಬೇಕಾದ್ರೂ ಏಳಬಹುದು. ನಾನು ಮಾತ್ರ ಟೈಂಗೆ ಸರ್‍ಯಾಗಿ ಏಳ್ದೆ ಇದ್ರೆ - ಮುಗೀತು: ಎಲ್ಲಾ ಉಲ್ಟಾ, ಪುಲ್ಟಾ!

ಹತ್ತು ಘಂಟೆಗೆ ಅವಾಂತ್ರದ ಕೆಲ್ಸ ಮುಗಿಸಿ ''ಉಸ್ಸಪ್ಪಾ'' ಅಂತ ಸುಧಾರಿಸ್ಕೋಳ್ಳೋಕೆ ಕೂತೆ. ಇವರು ಪೇಪರ್ ಓದಿ ಮುಗ್ಸಿ ಎದ್ದು, ಮೈಕೈ ಮುರಿಯುತ್ತಾ ಆರಾಮಾಗಿ ''ಏನು ಸಮಾಚಾರ'' ಅಂದ್ರು.

''ಪೇಪರ್ನ ಕೂಲಂಕುಷವಾಗಿ ಓದ್ದೋರು ನೀವು. ನಿಮ್ಗೆ ಎಲ್ಲಾ ಸಮಾಚಾರ ಗೊತ್ತಿರಬೇಕು. ಅದಿರ್ಲಿ, ಪಕ್ಕದ ಮನ್ಯೋರು ಇಲ್ವಾ?''

''ಇಲ್ಲಾ! ಅವರು ತಿರುಪತಿಗೆ ಹೋಗ್ತೀವಿ ಅಂತ್ಹೇಳಿ ಬೀಗದ ಕೈ ಕೊಟ್ಟು ಕೆಲ್ಸದೋಳು ಬಂದ್ರೆ ಕೊಡಿ ಅಂತ ಅಂದಿದ್ರಲ್ಲಾ! ನೀನು ಕೊಡ್ಲಿಲ್ವಾ?''

''ನನಗ್ಯಾರ್ರೀ ಹೇಳಿದ್ರು ಇದ್ನೆಲ್ಲಾ! ನಿಮ್ಗೆ ಎಲ್ಲಾ ಮರ್ತೆ ಹೋಗುತ್ತೆ - ನಾನು ಕೇಳಿದೆ ಅಂತ ಹೇಳಿದ್ರೆ...''

''ಇರ್ಲಿ ಬಿಡು, ನಾಳೆ ಅವ್ರು ಬಂದಾಗ ಕೊಡು''

''ಟ್ರಿಂಗ್'' ಫೋನ್ ಕರೆಯಿತು. ''ಹಲೋ'' ಎಂದೆ.

''ರಾಯರಿದ್ದಾರ್ಯೆ?''

''ಹುಂ. ಒಂದ್ನಿಮಿಷ ಬರ್ತಾರೆ'' ಎಂದು ಇವರಿಗೆ ರಿಸೀವರ್ ಕೊಟ್ಟೆ.

''ಓ. ಅದಕ್ಕೇನು! ಹಾರ್ದಿಕ ಅಭಿನಂದನೆಗಳು! ಐಸೀ, ನೋ ನೋ, ನೋ ಪ್ರಾಬ್ಲಂ ಎಟ್ ಆಲ್, ಓ ಎಸ್, ಖಂಡಿತ, ವಿ ವಿಲ್ ಬಿ ದೇರ್'' ರಿಸೀವರ್ ಇಟ್ಟು, ''ಅಲ್ವೇ ಗಂಗಾಧರ ಫೋನ್ ಮಾಡಿದ್ದು, ಅವನ ಮಗಳ ಮದುವೆ ನಿಶ್ಚಿತಾರ್ಥವಂತೆ ಇವತ್ತು. ಇವತ್ತು 11-30 ಘಂಟೆಗೆ ಮನೇಲೇ ಇಟ್ಕೊಂಡಿದ್ದಾರಂತೆ ಬಿ.ಟಿ.ಎಂ. ಲೇ ಔಟ್‌ನಲ್ಲಿ ಮನೆ, ಬೇಗ ರೆಡಿಯಾಗು ಹೋಗೋಣ'' ಗಡಬಡಿಸಿ ಎದ್ದರು.

''ಇಷ್ಟು ಬೇಗ ಗೊತ್ತಾಯ್ತಾ?''

''ಹೂಂ. ಅದೇ ಅಮೇರಿಕಾ ಗಂಡು! ಝಟ್ ಮಾಂಗ್ನಿ, ಫಟ್ ಬಿಯಾ ಅಂದ್ಹಾಗೆ'' - ''ಅಂತೂ ಪ್ರಭಾ ಬಾಳ ಲಕ್ಕೀ! ಬೇಗ ಫ್ರೀ ಆಗಿಬಿಟ್ಲು'' ನಾನೂ ಎದ್ದೆ. ಸಡನ್ನಾಗಿ ನೆನಪಾಯ್ತು ''ರೀ, ಸ್ವಲ್ಪ ಬೇಗ್ನೆ ಹೊರಡೋಣ, ರಸ್ತೇಲಿ ಆ ನೈನ್ತ್ ಬ್ಲಾಕ್ ಪೋಸ್ಟ್ ಆಫೀಸಿನಲ್ಲಿ ಕಾಗ್ದ ಹಾಕಿ ಹೋಗೋಣ''.

''ಅದಕ್ಕೀಗ್ಲೇ ಗದ್ಲಾನಾ! ನಾಳೆ ಡಬ್ಬಕ್ಕೆ ಹಾಕಿದ್ರೆ ಆಯ್ತು''.

''ಅಲ್ರೀ, ಅದು ಶೀನಿಗೆ ಬರೆದಿದ್ದು. ಅಮೇರಿಕಾಕ್ಕೆ ಹೋಗೋ ಕಾಗ್ದ. ಫ್ರಾಂಕ್ ಮಾಡಿಸ್ದೆ ಕಳ್ಸೋ ಹಾಗಿಲ್ಲ.''

''ಸ್ಸರೀ ಅಲ್ಲಿ ಕ್ಯೂ ಇದ್ರೆ?''

''ನೋಡೋಣ! ಬೇಗ ಹೊರಟ್ರೆ ಎಲ್ಲಾ ಆಗುತ್ತೆ. ಪಾಪ! ಶೀನಿಗೆ ಮನೆಯಿಂದ ಕಾಗದ ಬಂದೀತೇ ಅಂತ ಚಾತಕಪಕ್ಷಿ ತರಹ ಕಾದಿರ್ತಾನೆ;'' ಸಿದ್ಧಳಾಗಲು ಎದ್ದೆ.

ಶೀನಿಗೆ ಬರೆದ ಕಾಗದ ತೆಗೆದಿಟ್ಟೆ. ಬೆಂಗಳೂರಿನ ಎಲ್ಲಾ ಸುದ್ದಿ - ಒಳ್ಳೇದು, ಕೆಟ್ಟದ್ದು, ಅವನಿಗೆ ಇಷ್ಟವಾಗೋ ಸುದ್ದಿಗ್ಳ ಪೇಪರ್ ಕಟಿಂಗ್ಸ್, ಒಂದೆರಡು ಫೋಟೋ ಎಲ್ಲಾ ಹಾಕಿಟ್ಟಿದ್ದೆ. ಮನೇಲಿ ತೂಕ ಹಾಕಿದಾಗ ಮೂವತ್ತು ರೂಪಾಯಿನ ಸ್ಟಾಂಪು ಬೇಕು ಎಂದು ತಿಳೀತು. ಹದಿನೈದು ರೂಪಾಯಿನ ಎರಡು ಸ್ಟಾಂಪನ್ನು ಹಿಂದೆಯೇ ತೆಗೆದಿರಿಸಿದ್ದೆ. ಸದ್ಯ! ಈಗ ಕಾಸು ಖರ್ಚಿಲ್ಲದೆ ಕೆಲಸವಾಯ್ತು ಎಂದುಕೊಂಡೆ.

''ನನ್ನ ಬಾಚಣಿಗೆ ಎಲ್ಲಿ?'' ಇವರ ಕಿರ್ಲಾಟ.

''ನನ್ನ ಬಾಚಣಿಗೆ ತಗೋಬೇಡಿ;. ಒಂದ್ಮಣ ಎಣ್ಣೆ ಹಚ್ತೀರಾ ನೀವು!'' ನಾನು ಕೂಗಿದೆ.

''ಆಗ್ಲೆ ಹತ್ತೂವರೆ. ಬೇಗ್ಬೇಗ ತಲೆ ಬಾಚ್ಕೊಂಡು ಬಾ. ಕಾರ್‌ಗೆ ಪೆಟ್ರೋಲ್ ಹಾಕಿಸ್ಕೊಂಡು ಬರ್ತೀನಿ'' ಇವರು ದಡಬಡ ಹೊರಟರು.

ನನ್ನ ಬಾಚಣಿಗೆ ಮಂಗಮಾಯಾ! ಬೆಳಗಿನಿಂದ ಮಗ, ಮಗ್ಳು, ಅವಳ ಫ್ರೆಂಡ್ಸ್ ಎಲ್ಲಾ ಕನ್ನಡಿ ಮುಂದೆ ನಿಂತು ಸಿಂಗಾರ ಮಾಡಿಕೊಳ್ಳೋರೇ. ಎಲ್ಲಿ ಹಾಕಿದ್ದರೋ ನನ್ನ ಹಣಿಗೇನಾ. ಹೋಗ್ಲಿ ಅಂತ ಇವರ ಬಾಚಣಿಗೇಲೆ ತಲೆ ಹೆಕ್ಕಿಕೊಂಡು ಬೇಗ ರೆಡಿಯಾಗಿ, ಕಾಗದ, ಪರ್ಸು ಎಲ್ಲಾ ಎತ್ಕೊಂಡು ಓಡಿದೆ.

ಕಾರ್ ಸ್ಟಾರ್ಟ್ ಆದಾಗ ತಕ್ಷಣ ಎದುರಿಗೆ ದಾಸಯ್ಯ ಪ್ರತ್ಯಕ್ಷ. ದಾಸಯ್ಯನೇ ಅಪರೂಪ. ಇವತ್ತೇ ಬರಬೇಕೆ? ''ಎರ್ಡು ನಿಮಿಷ ತಡೆದು ಹೋಗೋಣ'' ಅಂದೆ. ''ರಾಮ ರಾಮ! ನಿನ್ನ ಮೌಢ್ಯಕ್ಕೆ ಕೊನೆಯೇ ಇಲ್ವೆ?'' ಅಂತ ಹಂಗಿಸಿ ಹೊರಟೇಬಿಟ್ರು.

ಹೊರಟು ಐದು ನಿಮಿಷ ಆಗಿಲ್ಲ. ನನ್ನ ತಲೆಯಲ್ಲಿ ''ಬುಳಬುಳ'' ಅಂತ ಏನೋ ಹರಿದಹಾಗೆ ಆಯಿತು. ಇವರ ಕಡೆ ತಿರ್ಗಿ ನೋಡೋ ಅಷ್ಟಲ್ಲೇ ಇವರೂ ಕಾರ್‌ನ ರಸ್ತೆ ಸೈಡ್‌ಗೆ ತಂದು, ಅಂಚಿನಲ್ಲಿ ನಿಲ್ಲಿಸಿದರು.

''ಯಾಕೆ?''

''ತಲೆ ಒಳಗೆಲ್ಲಾ ಏನೋ 'ಬುಳಬುಳ' ಅಂತಾ ಹರಿತಾ ಇದ್ದ ಹಾಗ ಇದೆ. ಕತ್ತಿನ ಹತ್ರ ಏನೋ ಕಚ್ಚಿದ ಹಾಗಾಯಿತು'' ಅಂತ ಕರವಸ್ತ್ರ ತೆಗೆದರು. ಕಾಲರ್ ಮೇಲೆ ಎರಡು-ಮೂರು ಇರುವೆ ಹರೀತಾ ಇದೆ. ''ಆ ಹಾಳು ಬಾಚಣಿಗೆಯಿಂದ ಇದೆಲ್ಲಾ. ಆ ತಲೆಗೆ ಅದೆಷ್ಟು ಎಣ್ಣೆ ಹಚ್ತೀರಿ! ಇರ್ವೆ ಬರ್ದೆ ಇನ್ನೇನಾಗುತ್ತೆ! ನನ್ನ ಹಣಿಗೆ ಸಿಕ್ಕೆ ನಿಂದನ್ನೇ ಬಳಸ್ದೆ - ಗ್ರಹಚಾರ! ನಿಮ್ದೇನೋ ಕ್ರಾಪು. ತಲೆ ಕೊಡವಿಕೊಳ್ಳುವುದು ಸುಲಭ. ನನ್ನ ಕಥೆ. ಆ ಗಂಟು, ಪಿನ್ನು, ನೆಟ್ಟೂ ಎಲ್ಲಾ ಬಿಚ್ಚಿ - ಪ್ರಯಾಸ. ತಲೆ ಕೂದಲು ಬಿಚ್ಚಿ ಕೊಡವಿ 'ಪೋನಿಟೇಲ್' ಕಟ್ಟಿಕೊಂಡೆ. ಮತ್ತೆ ಹೊರಟೆವು.

''ಸ್ವಲ್ಪ ನಿಲ್ಲಿ, ಪೋಸ್ಟ್ ಆಫೀಸ್ ಬಂತು. ಸೀನಿ ಕಾಗದ ಪೋಸ್ಟ್ ಮಾಡಿ ಬರ್ತೀನಿ''.

ಸ್ಸ...ರ! ನೀನಿನ್ನು ಇಳಿದು ಈ ರಸ್ತೆ ಕ್ರಾಸ್ ಮಾಡಿ ಬಂದ ಹಾಗೇ ಇದೆ. ನಾನು ಹೋಗಿ ಬರ್ತೀನಿ, ಕಾಗ್ದ ಕೊಡು''. ಕಾಗದ ಇಸಕೊಂಡು ಹೊರಟರು.

''ಮೂವತ್ತು ರೂಪಾಯಿನ ಸ್ಟಾಂಪು ಹಾಕಿದ್ದೀನಿ. ಇನ್ನೂ ಹೆಚ್ಚಿ ಬೇಕಾದ್ರೆ ಹಾಕಿ ಫ್ರಾಂಕ್ ಮಾಡ್ಸಿ.''

''ಸಂಗೆಲ್ಲಾ ಗೊತ್ತಿದೆ, ನನ್ನ ಹಳ್ಳೀಗಮಾರ ಅನ್ಕೊಂಡೆಯಾ'' ರೇಗಿಕೊಂಡು ಹೊರಟರು.

ಕಾರಿನಲ್ಲಿ ಕಾದು ಕುಳಿತೆ. 5 ನಿಮಿಷವಾಯ್ತು. ಹತ್ತು, ಹದಿನೈದು ನಿಮಿಷಗಳಾದ್ರೂ, ಆಸಾಮಿ ಪತ್ತೇ ಇಲ್ಲ. ಕ್ಯೂ ತುಂಬಾ ದೊಡ್ಡದಾಗಿದ್ರೆ ಬಂದುಬಿಡಿ ಎನ್ನಬೇಕಾಗಿತ್ತು. ಆಗ್ಲೇ ಹನ್ನೊಂದೂ ಕಾಲು. ಇನ್ನು ಬಿ.ಟಿ.ಎಂ. ಲೇಔಟಿಗೆ ಹೋಗೋದು ಯಾವಾಗ? ಯಾವ ಹಳೇ ಫ್ರೆಂಡ್ ಸಿಕ್ಕಿದ್ನೋ ಏನೋ! ಕಾದು ಕಾದು, ನಾನು ಒಳಗೆ ಬೇಯುತ್ತಾ. ಮುಖವೆಲ್ಲಾ ಬೆವರಿ ಜಿನುಗಲು ಶುರುವಾಯ್ತು.

ಅಂತೂ ಸುಮಾರು ಅರ್ಧಗಂಟೆಯ ಮೇಲೆ ಇವರು ಆಚೆ ಬಂದ್ರು. ಜೊತೆಗೆ ಪೋಸ್ಟ್‌ಮಾಸ್ಟರ್ ಪರಶುರಾಮಯ್ಯ! ಇಬ್ರೂ ಕಾರ್ ಹತ್ರ ಬಂದ್ರು. ಇವರ ಮುಖ ಕೆಂಪಗಾಗಿ ಬೆವರೊರಿಸಿಕೊಳ್ತಾ ಇದ್ರು.

''ಏನಮ್ಮಾ! ನಿಮ್ಗೆ ಈ ಸ್ಟಾಂಪ್ ಎಲ್ಲಿ ಸಿಕ್ತು?'' ಪರಶುರಾಮಯ್ಯ ಕೇಳಿದ್ರು.

''ಯಾವ ಸ್ಟಾಂಪು?'' ಕೆಟ್ಟ ಗಾಭರಿ ಆಯ್ತು ನನಗೆ.

''ಈ ಫಾರಿನ್ ಲೆಟರ್‌ಗೆ ಹಾಕೀದ್ದೀರಲ್ಲಾ ಹದಿನೈದು ರೂಪಾಯಿ ಸ್ಟಾಂಪು - ಅದೆಲ್ಲಿತ್ತು ನಿಮಗೆ?''

''ಓ ಅದಾ! ಮೊನ್ನೆ ನಾನು ಹಳೇ ಕಾಗ್ದ ಪತ್ರ ಎಲ್ಲಾ ತೆಗೆದು ಕ್ಲೀನ್ ಮಾಡ್ತಾ ಇದ್ದಾಗ ಟಿ.ವಿ. ಲೈಸೆನ್ಸ್ ಪುಸ್ತಕದಲ್ಲಿ ಈ ಸ್ಟಾಂಪ್ಸ್ ಇದ್ವು. ಇವಕ್ಕೆ ಮುದ್ರೆ ಹಾಕಿಸುವ ಮುಂಚೆಯೇ ಟಿ.ವಿ. ಲೈಸೆನ್ಸ್ ಕಾನ್ಸಲ್ ಮಾಡಿದ್ರು. ಸರಿ ಈ ವಿದೇಶೀ ಕಾಗದಗಳಿಗೆ ಅಗಾಧ ಸ್ಟಾಂಪ್ ಬೇಕು. ತೆಗೆದು ಇಟ್ಟಿದ್ದನ್ನು ಇದಕ್ಕೆ ಹಾಕ್ದೆ.''

''ಅಮ್ಮಾ - ಈಗ ಈ ಸ್ಟಾಂಪ್ ಚಲಾವಣೆಯಲ್ಲಿ ಇಲ್ಲ. ಅಲ್ಲದೆ ಹಳೆಯ ಹಲವು ಸ್ಟಾಂಪ್ ಶೀಟ್‌ಗಳು ಕಳುವಾಗಿವೆ. ಅದು ಹೇಗಾಯಿತು, ಎಲ್ಲಿ



ಹೋಯ್ತು ಅಂತ ನಮ್ಮ ಪೋಸ್ಟಲ್ ಡಿಪಾರ್ಟ್‌ಮೆಂಟ್ ಒದ್ದಾಡ್ತಾ ಇದ್ದಾರೆ. ನಿಮ್ಮ ಕಾಗ್ದ ತೂಕಕ್ಕೆ ಹಾಕಿದಾಗ ಆ ಕ್ಲಾರ್ಕು ಈ ಸ್ಟಾಂಪು ನೋಡಿ ಸದ್ದಿಲ್ಲದೆ ಎದ್ದು ಬಂದು ನನಗೆ ಫೋನ್ ಮಾಡ್ದ. ಸ್ಟಾಂಪು - ನಾವು ಹುಡುಕ್ತಾ ಇದ್ದದ್ದು ಸಿಕ್ಕಿದೆ. ಪೋಲೀಸ್‌ಗೆ ಕಂಪ್ಲೇಟ್ ಕೊಡಿ'' ಅಂತ. ತಕ್ಷಣ ನಾನು ಓಡಿ ಬಂದೆ. ಅಷ್ಟು ಹೊತ್ತಿಗಾಗ್ಲೆ ಇವರ್‍ನ ಪಕ್ಕದ ರೂಮಿನಲ್ಲಿ ತನಿಖೆಗಾಗಿ ಕೂರಿಸಿದ್ದರು. ನಾನು ನೋಡ್ತೀನಿ ನಂ ರಾಯ್ರು! ಛೇ. ಇವ್ರು ಇಂತಹ ಕೆಲಸಕ್ಕೆ ಹ್ಯಾಗೆ ಕೈ ಹಾಕ್ತಾರೆ. ಏನೋ ಮೋಸವಾಗಿದೆ ಅಂತ ಅವರ್‍ನ ಕೇಳಿದೆ. ನಿಮ್ಮನ್ನು ಕೇಳಿ ಎಂದ್ರು. ಅದಕ್ಕೆ ವಿಚಾರಿಸಲು ಬಂದೆ. ನೋಡಿ ಇದು ಅಪರಾಧ. ಚಲಾವಣೆಯಲ್ಲಿ ಇಲ್ಲದ್ದನ್ನು ಪೋಸ್ ಆಫೀಸಿನಲ್ಲಿ ವಿಚಾರಿಸಿ ಹಾಕ್ಬೇಕು ತಾಯಿ! ಏನೋ ನಂಗೆ ರಾಯರು ಪರಿಚಯವಿರುವುದರಿಂದ ಸರಿಹೋಯ್ತು. ಇಲ್ಲಿದ್ರೆ ದೊಡ್ಡ ಹಗರಣ ಆಗಿ ಹೋಗ್ತಾ ಇತ್ತು. ಅವರೆಲ್ಲಾ ಸೇರಿ ಕೇಳಿದ ಪ್ರಶ್ನೆಗಳಿಗೆ ರಾಯರು ಬಹಳ ಗಾಭರಿ ಆಗಿಬಿಟ್ಟಿದ್ದಾರೆ. ಹೋಗಿ ಬನ್ನಿ. ಬರ್‍ತೀನಿ ರಾಯ್ರೆ. ಈ ಕಾಗ್ದ ತೆಗೊಳ್ಳಿ! ಬೇರೆ ಕವರಿನಲ್ಲಿ ಹಾಕಿ, ಸರಿಯಾದ ಸ್ಟಾಂಪ್ ಹಾಕಿ ಕಳ್ಸಿ'' ಅಂತ ಹೇಳಿ ಹೊರಟ್ರು.

ಮೌನವಾಗಿ ಕುಳಿತಿದ್ದೆ. ಇವರೂ ಮಾತಿಲ್ಲದೆ ಬಂದು ಕುಳಿತರು. ಘಂಟೆ ಆಗ್ಲೆ ಒಂದು! ನೀವೂ ಸಂಸಾರವಂದಿಗರು - ಮುಂದೇನಾಯಿತು ಊಹಿಸಿಕೊಳ್ಳುತ್ತೀರಲ್ಲವೇ''

# ಗೌಡರು ಮಂಕಾದದ್ದೇಕೆ?

– ಎಚ್.ಎಲ್. ಕೇಶವಮೂರ್ತಿ

ಕ್ಯಾತೇಗೌಡರು ಚಿಂತಾಕ್ರಾಂತರಾಗಿದ್ದರು. ಅವರ ತಲೆ ಹುಳುಬಿದ್ದ ಹೊಂಡ ಆಗಿತ್ತು.

ಪಾಪ ಹಾಗೆ ಆಗಬೇಕಾದ್ದೆ. ಗೌಡರು ಸುಸಂಸ್ಕೃತ ಕುಟುಂಬದಿಂದ ಬಂದಿದ್ದರು. ಅವರ ತಾತ ಯಾವ ಮಾಯದಲ್ಲಿ ವಿದ್ಯೆ ಕಲಿತಿದ್ದರೊ, ಜೈಮಿನಿ ಭಾರತವನ್ನು ಸುಶ್ರಾವ್ಯವಾಗಿ ಹಾಡಿ, ಘನ ವಿದ್ವಾಂಸರೂ ನಾಚುವಂತೆ ಅರ್ಥೈಸುತ್ತಿದ್ದರು. ಕೂಲಿ ಮಠದಲ್ಲಿ ಕಲಿತ ಅವರ ತಂದೆಗೆ ಗಮಕ ಕಲೆ ಕರತಲಾಮಲಕ ಆಗಿತ್ತು. ಸ್ವತಃ ಗೌಡರಿಗೆ ಕುವೆಂಪು ವಿರಚಿತ ರಾಮಾಯಣದರ್ಶನಂ ಕಂಠಪಾಠವಾಗಿತ್ತು. ಕನ್ನಡದ ಶ್ರೇಷ್ಠ ಕೃತಿಗಳನ್ನೆಲ್ಲ ಅಧ್ಯಯನ ಮಾಡಿ ಆನಂದಿಸಿದ್ದರು. ತಮ್ಮ ಸುತ್ತಲಿನವರ ಕರ್ಣಗಳಿಗೂ ಸಾಹಿತ್ಯ ಸುಧೆಯನ್ನು ಹರಿಸಿ, ತಾವು ಅನುಭವಿಸಿದ ಆನಂದವನ್ನು ಅವರೂ ಅನುಭವಿಸುವಂತೆ ಮಾಡಲು ಶತ ಪ್ರಯತ್ನ ನಡೆಸಿದ್ದರು. ಆ ಜನರಿಗೋ ಮಾತುಕತೆಯಲ್ಲಿ ಅವರಿವರ ಮೇಲಿನ ಚಾಡಿ ಮಾತು ಬಂದರೆ ಕಿವಿಗೆ ಆಪ್ಯಾಯಮಾನ; ಟಿ.ವಿ. ಧಾರಾವಾಹಿಗಳ ಕತೆ ಬಂದರೆ ಎಲ್ಲಿಲ್ಲದ ಖುಷಿ. ಸಾಹಿತ್ಯದ ಬಲವನ್ನು ಹೇಗೆ ಮೂಡಿಸುವುದು ಅನ್ನೋದು ಗೌಡರ ಚಿಂತೆಯಾಗಿ ಕಾಡಿತ್ತು.

ಗೌಡರು ಅಳೆದರು, ಸುರಿದರು. ಸಾಹಿತಿಗಳ ಹೆಸರಾದರೂ ಆ ಜನರ ಕಿವಿಗಳಲ್ಲಿ ಲಾಸ್ಯವಾಡಲಿ, ಮುಂದೆ ಅದು ಸಾಹಿತ್ಯ ಕೃತಿಗಳ ಬಗ್ಗೆ ಆಸಕ್ತಿ ಮೂಡಿಸಬಹುದು ಎಂದೆಲ್ಲ ಯೋಚಿಸಿದರು. ಸಾಹಿತಿಗಳ ಹೆಸರನ್ನು ಪ್ರಚುರಪಡಿಸುವುದು ಹೇಗೆ?

ಯುರೇಕ!

ಸಾಹಿತಿಗಳ ಹೆಸರನ್ನು ಬಸ್ಸುಗಳಿಗೆ ಇಡುವುದರಿಂದ!

ಗೌಡರ ಆಲೋಚನೆಯಲ್ಲಿದ್ದುದ್ದು ಇಡೀ ಕರ್ನಾಟಕದ ಜನತೆ ಅಲ್ಲ. ಕೇವಲ ಅವರ ಜಿಲ್ಲೆಯ ಜನ. ಸರ್ಕಾರಿ ಬಸ್ಸುಗಳಿಗಿಂತ ಖಾಸಗಿ ಬಸ್ಸುಗಳೇ ಇದಕ್ಕೆ ಸಮರ್ಪಕ.

ಈ ಆಲೋಚನೆ ಬಂದದ್ದೇ ತಡ, ಗೌಡರು ಬಸ್ ಮಾಲೀಕರ ಸಭೆ ಕರೆದರು. ಸಂಭಾವಿತರು, ಸಾಹಿತ್ಯ ಸಂಸ್ಕೃತಿಗಳ ಪ್ರತೀಕದಂತೆ ಇದ್ದವರು, ಮೇಲಾಗಿ ಆಗರ್ಭ ಶ್ರೀಮಂತರು ಸಭೆ ಕರೆದರೆ ಬರದೆ ಇರುತ್ತಾರೆಯೆ? ವಿಷಯ ಪ್ರಸ್ತಾಪಿಸಿ, ತಮ್ಮ ಮನದಾಳದ ಆಸೆಯನ್ನು ಸಭೆ ಮುಂದಿಟ್ಟರು. ತಿರುಕ ಸಾಹಿತಿಗಳ ಹೆಸರಿಟ್ಟರೆ ತಾವೂ ಎಲ್ಲಿ ಆರ್ಥಿಕವಾಗಿ ಅವರ ಹಾಗೇ ಆಗಿಬಿಡ್ತೀವೊ ಅನ್ನೊ ಗುಮಾನಿ ಗುದ್ದುಕೊಂಡು ಬಂದರೂ ಗೌಡರ ಮೇಲಿನ ಗೌರವದಿಂದ ಸುಮ್ಮನೆ ಮುಖ ಮುಖ ನೋಡಿದರು. ಗೌಡರೆ ಮುಂದುವರಿಸಿದರು: 'ಏನು ಅಯ್ಯಂಗಾರ್ರೆ ಏನು ಹೇಳ್ತೀರಿ'.

'ಆಗಬಹುದು, ಘನವಾದ ಆಲೋಚನೆ. ಸಾಹಿತಿಗಳ ಹೆಸರಿದ್ದರೆ ನಮ್ಮ ಬಸ್ಸುಗಳಿಗೂ ಘನತೆ, ಗೌರವ ಬರುತ್ತೆ'

'ನಿಮ್ಮಿಂದಲೇ ಪ್ರಾರಂಭ ಆಗಲಿ ಕವಿ ಗಿರೀಗೌಡರ ಹೆಸರು ನಿಮ್ಮ ಬಸ್ಸಿಗೆ ಇರಲಿ ಅಂತೀರಾ?'

'ಅವರ ಸಾಹಿತ್ಯ ಕೃತಿಗಳನ್ನು ನಾನು ಓದಿದ್ದೇನೆ. ಸೊಗಸಾದ ಭಾಷೆ. ಸರಸ್ವತಿ ಅವರಿಗೆ ಒಲಿದಿದ್ದಾಳೆ'

'ಆಗಬಹುದು ತಾನೆ?'

'ಬಸ್ಸು ನನ್ನ ಹೆಸರಿನಲ್ಲಿರೋದು ನಿಜ. ಆದರೆ ನಾನು ಏನು ಮಾಡಬೇಕಾದರೂ ನಮ್ಮ ಮನೆಯವರ ಒಪ್ಪಿಗೆ ಸಿಗಬೇಕು....' ರಾಗ ಎಳೆದರು ಅಯ್ಯಂಗಾರ್ಯರು.

ಗಿರೀಗೌಡ ಎಕ್ಸ್‌ಪ್ರೆಸ್ ಅಂತ ತನ್ನ ಬಸ್ಸಿಗೆ ಯಾಕಿಡಬಾರದು ಅನ್ನಿಸಿತು ಸಿದ್ದೇಗೌಡರಿಗೆ. 'ನನ್ನ ಬಸ್ಸಿಗೆ....' ಅಂತ ಮೇಲಕ್ಕೆ ಏಳುತ್ತಿದ್ದ ಗೌಡರು 'ಅವ್ನು ನಮ್ಮವನಲ್ಲ ಕಣೊ, ಕುರುಬ್ರೋನು' ಅನ್ನುವ ಪಕ್ಕದವರ ಮಾತು ಕೇಳಿ ತಪಕ್ಕಂತ ಕುಂತ್ಕಂಡ್ರು.

'ಸಿದ್ದೇಗೌಡರು ಏನೋ ಹೇಳ್ತಿದ್ರಿ...'

'ನನ್ನ ಬಸ್ಸಿಗೆ ಆ ಹೆಸರು ಬ್ಯಾಡ ಅಂತಾನ'

ಸಾಹಿತಿಯ ಕೃತಿಯ ಮೌಲ್ಯಕ್ಕಿಂತ ಅವರ ಕುಲದ ಮೆರೆದಾಟವೇ ಮೇಲಾಯ್ತು. ಹೀಗಾದರೂ ಸಾಹಿತಿಗಳ ಹೆಸರು ಜನರ ಬಾಯಲ್ಲಿ ಆಡಲಿ ಅನ್ನೋ ಘನ ಉದ್ದೇಶದಿಂದ ಗೌಡರು ಬಸ್ ಮಾಲೀಕರ ಜಾತಿಗೂ ಸಾಹಿತಿಗೂ ಸಮೀಕರಿಸಿದರು.

ಸಾಹಿತಿಗಳ ನಾಮಧೇಯ ಹೊತ್ತ ಬಸ್ಸುಗಳು ಓಡಾಡಲು ಪ್ರಾರಂಭಿಸಿ ನಾಲ್ಕೈದು ತಿಂಗಳು ಕಳೆದಿರಬಹುದು. ಗೌಡರಿಗೆ ತಮ್ಮ ವಿನೂತನ ಪ್ರಯೋಗದ ಪರಿಣಾಮ ತಿಳಿಯುವ ಕುತೂಹಲ. ಬಸ್ಸಿಗೆ ಕಾಯುವವರಂತೆ ನಾಲ್ಕು ರಸ್ತೆ ಕೂಡುವ ಜಾಗದಲ್ಲಿ ನಿಂತರು. ಅಲ್ಲಲ್ಲಿ ಬಸ್ಸಿಗೆ ಕಾಯುತ್ತಿದ್ದ ಜನ. ಗೌಡರ ಕಿವಿಯೆಲ್ಲ ಅವರ ಮಾತುಗಳತ್ತ. ಅವರ ಬಾಯಿಂದ ಸಾಹಿತಿಯ ಹೆಸರು ಬರುವುದೇ ಅಂತ ಜಾತಕ ಪಕ್ಷಿಯಂತೆ ಕಾದಿದ್ದರು.

ಬಂತೂ...

'ಇವನ್ನಮ್ಮುನ್ ಗಿರೀಗೌಡ ಯಾವತ್ತೂ ಇಂಗೇ ಲೇಟು'

'ಗುಜರೀಗಾಕ್ದೆ ಈ ಗಿರಿಗೌಡ್ನ ಇಲ್ಲಿ ಓಡುಸ್ತಾ ಅವ್ನಲ್ಲ ಆ ನನ್ ಮಗಂಗೆ ಒದೀಬೇಕು'

ಕಾದ ಸೀಸದಂತಹ ಮಾತು!

'ಶಿವಶಿವ' ಅಂತ ಗೌಡರು ಕಿವಿ ಮುಚ್ಚಿಕೊಂಡರು.

ಸಭೆ ಸಮಾರಂಭಗಳಿಗೆ ತಡವಾಗಿ ಬರೋ ರಾಜಕಾರಣಿ ವರಸೇನೆ ಈ ಬಸ್ಸೂ ಮಾಡಿದರೆ ಜನರಿಗೆ ಸಿಟ್ಟು ಬರುವುದು ಸಹಜ. ಅದಕ್ಕೇ ಹೀಗೆ ಮಾತನಾಡುತ್ತಿದ್ದಾರೆ ಅಂತ ತಮಗೆ ಸಮಾಧಾನ ಪಟ್ಟುಕೊಂಡರು.

ವೇಳೆಗೆ ಸರಿಯಾಗಿ ಬರುವ ಬಸ್‌ಗಾಗಿ ಕಾಯುತ್ತ ನಿಂತರು.

'ಅನಂತ ಅಯ್ಯಂಗಾರ್ ಬಸ್ ಸರ್ವೀಸ್' ನಿಗದಿತ ಸಮಯಕ್ಕೆ ಸರಿಯಾಗಿ ಬಂತು. ಓಡುತ್ತಾ ಬಂದು ಬಸ್ ಹಿಡಿದ ಒಬ್ಬ 'ಈ ನನ್‌ಮಗ ಅಯ್ಯಂಗಾರೀದು ಟೇಮು ಅಂದ್ರೆ ಟೇಮು' ಅಂದದ್ದು ಕಿವಿಗೆ ಬಿದ್ದಾಗ ಮರ ನೋಡುತ್ತ ನಿಂತರು ಗೌಡರು.

ಆ ಬಸ್ಸಿನ ಹಿಂದೇನೆ 'ಷರೀಫ್ ಎಕ್ಸ್‌ಪ್ರೆಸ್' ಬಂತು. 'ಲೋ ಸಾಬಿ ನನ್ಮಗನೇ ಇನ್ನೂ ಅರ್ಧಗಂಟೆ ಐತಲ್ಲೋ ನಿನ್ ಟೇಮ್ಗೆ. ಇಸ್ಟೊತ್ಗೆ ಯಾಕ್ಬಂದೆ' ಅಂತ ಮುಂದಿನ ಬಸ್ಸಿನ ಕಂಡಕ್ಟರ್ ಮಹಾಶಯ ಸಹಸ್ರ ನಾಮಾರ್ಚನೆ ಮಾಡಿದ್ದು ಕೇಳಿ ಮರ ನೋಡುತ್ತಿದ್ದ ಗೌಡರು 'ಏನೀ ದುರ್ದೈವವೊ' ಅಂತ ಘಂಟಸಾಲ ಶೈಲಿ ಹೇಳಿ, ತಲೆ ಮೇಲೆ ಟವೆಲ್ ಹಾಕಿಕೊಂಡರು.

ಗೌಡರ ಮುಖದಿಂದ ಅವತ್ತು ಮಾಯವಾದ ಸಾಹಿತ್ಯದ ಕಳೆ ಮತ್ತೆ ಮೂಡಲೇ ಇಲ್ಲ!

# ಮುಖ್ಯ ಅತಿಥಿಯ ಪಡಿಪಾಟಲು

**- ವೈ.ಎನ್. ಗುಂಡೂರಾವ್**

ಹೀಗೊಮ್ಮೆ ಒಂದು ಲಲಿತ ಕಲಾ ಸಂಘದ ವತಿಯಿಂದ ಏರ್ಪಡಿಸಿದ್ದ ಒಂದು ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಯಾಗಿ ಹೋಗಬೇಕಾಯಿತು. ನನಗೆ ಈ ರೀತಿ ಮುಖ್ಯ ಅತಿಥಿಯಾಗಿ ಮಾತನಾಡಿ ಅಭ್ಯಾಸವಿಲ್ಲದಿದ್ದರೂ ನನ್ನ ಸ್ನೇಹಿತರೇ ಕೆಲವು ಸದಸ್ಯರು ಆ ಲಲಿತ ಕಲಾ ಸಂಘದಲ್ಲಿದ್ದುದರಿಂದ ''ನೀನು ಸಿಕ್ಕಾಗಲೆಲ್ಲಾ ಏನೇನೋ ನಮ್ಮ ಹತ್ತಿರ ಮಾತನಾಡುತ್ತಿದ್ದೆಯಲ್ಲಾ ಅದನ್ನೇ ವೇದಿಕೆಯ ಕುರ್ಚಿಯ ಮೇಲೆ ಕುಳಿತು ಮಾತನಾಡಿದರೆ ಸಾಕು'' ಎಂದರು. ಸರಿ ಅದಕ್ಕೇನಂತೆ ಬರ್‍ತೀನಿ. ಆದರೆ ಪ್ರಿಪರೇಷನ್ನಿಗೆ ಕೊಂಚ ಅವಕಾಶ ಕೊಡಿ ಎಂದೆ.

ಸದ್ಯ ನೀನು ಪ್ರಿಪೇರಾಗಿ ಬಂದು ಎರಡು ಘಂಟೆ ಮಾತನಾಡಲು ಅವಕಾಶವಿಲ್ಲ. ನಿನಗೆ ಕೊಡುವುದು ಒಂದು ಘಂಟೆಯ ಕಾಲಾವಧಿ ಅಷ್ಟೆ. ನೀನೇನಾದರೂ ಎರಡು ಘಂಟೆ ಮಾತನಾಡಲು ನಿಂತರೆ ಅಡ್ಡಿಯಿಲ್ಲ ಆದರೆ ನಾವ್ಯಾರೂ ಇರುವುದಿಲ್ಲ, ಹೇಗೂ ತಿಂಡಿ - ಕಾಫಿ ಮೊದಲೇ ಕೊಟ್ಟುಬಿಟ್ಟಿರುತ್ತೇವೆ, ನಾವಿಲ್ಲದಿದ್ದರೂ ನಡೆಯುತ್ತೆ ಎಂದರು.

''ಇಲ್ಲಪ್ಪ, ನೀವು ಹೇಳಿದಂತೆ ಒಂದು ಘಂಟೆಯೊಳಗೆ ಮುಗಿಸ್ತೇನೆ, ಯೋಚನೆ ಬೇಡ'' ಎಂದು ಹೇಳಿದೆ.

ಅಂದು ಮನೆಯ ಹತ್ತಿರಕ್ಕೆ ಸಂಜೆ 4 ಘಂಟೆಗೆ ಕಾರು ಬಂತು. ಹತ್ತಿ ಹೊರಟೆ. ಲಲಿತ ಕಲಾ ಸಂಘ ತಲುಪಿದಾಗ ಹಲವಾರು ಮಂದಿ ಸದಸ್ಯರು ಆಗಲೇ ಜಮಾಯಿಸಿದ್ದರು. ಸಂಘದ ಪದಾಧಿಕಾರಿಗಳನ್ನು ಪರಿಚಯಿಸಿದರು. ಲಲಿತಕಲಾ ಸಂಘದ ಕಟ್ಟಡ, ಗ್ರಂಥಾಲಯ, ಲಲಿತ ಕಲೆಗಳ ಬಗ್ಗೆ ಕೊಡುತ್ತಿರುವ ಶಿಕ್ಷಣ ಎಲ್ಲಾ ಪರಿಚಯಿಸಿದ ನಂತರ ಪೊಗದಸ್ತಾದ ತಿಂಡಿ - ಕಾಫಿ ವ್ಯವಸ್ಥೆಯಾಗಿತ್ತು. ನನಗೂ ಬೆಳಗಿನಿಂದ ಮೂರು - ನಾಲ್ಕು ಕಡೆ ಬೇರೆ ಬೇರೆ ಕೆಲಸಗಳಲ್ಲಿ ತೊಡಗಿಕೊಂಡಿದ್ದರಿಂದ ಸುತ್ತಿ ಸುತ್ತಿ ಸಾಕಾಗಿ ಚೆನ್ನಾಗಿ ಇಳಿಸಿದೆ.

ಸರ್ ಹಾಕಿಸಿಕೊಳ್ಳಿ ಸಾರ್ ಇನ್ನು ಸ್ವಲ್ಪ, ಒಂದು ಬೋಂಡ ಎಂದು ನಾನೇ ಕಾರ್ಯದರ್ಶಿ ಮತ್ತು ಅಧ್ಯಕ್ಷರಿಗೆ ಬಲವಂತ ಮಾಡಿದೆ.

ಅಯ್ಯೋ ಬೇಡಿ ಸಾರ್, ಊಟ ಮಾಡಿದ್ದೇ ತುಂಬಾ ತಡ ಎಂದು ಸಂಕೋಚ ಪಡಲಾರಂಭಿಸಿದರು.

ಹಸಿವೆ ತಾಳಲಾರದೆ ನಾನೇ ಕೇಳಿ ಇನ್ನೊಂದು ಸಾರಿ ಕೇಸರಿ ಬಾತ್ ಮತ್ತು ಪೋಂಡಾವನ್ನು ಹಾಕಿಸಿಕೊಂಡಾಗ ತೃಪ್ತಿ ಎನಿಸಿತು. ನಾನು ಹೀಗೆ ತಿನ್ನುತ್ತಾ ಕುಳಿತಿದ್ದು ನೋಡಿ ಬಹುಶಃ ಸದಸ್ಯರೊಬ್ಬರಿಗೆ ಸಂದೇಹ ಬಂದಿರಬೇಕು. ಸರ್. 5 ಘಂಟೆಗೆ ಸರಿಯಾಗಿ ಕಾರ್ಯಕ್ರಮ ಪ್ರಾರಂಭಿಸಿಬಿಡೋಣವಾ ಎಂದ. ಇದು ನನ್ನ ತಿಂಡಿ ಕಾರ್ಯಕ್ರಮಕ್ಕೆ ಬೇಗ ಫುಲ್‌ಸ್ಟಾಪ್ ಹಾಕು ಎಂದು ಪರೋಕ್ಷವಾಗಿ ಸೂಚನೆ ಕೊಟ್ಟಂತಿತ್ತು. ಕಾಫಿ ಕುಡಿದ ನಂತರ ಸಭಾಂಗಣದತ್ತ ಕರೆದೊಯ್ದರು.

ನಾನು ಸಭಿಕರಲ್ಲಿ ಒಬ್ಬನಾಗಿ ಮೊದಲ ಸಾಲಿನಲ್ಲಿ ಹೋಗಿ ಕುಳಿತೆ. ನನ್ನ ಪಕ್ಕದ ಮೂರನೆಯ ಕುರ್ಚಿಯಲ್ಲಿ ಸಂಸ್ಥೆಯ ಅಧ್ಯಕ್ಷರು ಆಸೀನರಾಗಿದ್ದರು. ವೇದಿಕೆಯ ಮೇಲೆ ಎರಡು ಕುರ್ಚಿಗಳಿದ್ದುದನ್ನು ನೋಡಿ ಬಹುಶಃ ಇನ್ನೊಬ್ಬರು ಭಾಷಣಕಾರರಿಬಹುದೆಂದು ಯೋಚಿಸಿದೆ.

ಅಷ್ಟರಲ್ಲಿ ಕಾರ್ಯದರ್ಶಿ ಸಭೆಯನ್ನುದ್ದೇಶಿಸಿ ಸ್ವಾಗತ ಮಾಡಿ ಅತಿಥಿಗಳನ್ನು ವೇದಿಕೆಗೆ ಕರೆ ತರುವಂತೆ ಸಂಘದ ಅಧ್ಯಕ್ಷರನ್ನು ಕೋರಿದರು. ನಾನು ವೇದಿಕೆಯತ್ತ ಹೊರಡಲು ಎದ್ದುನಿಂತೆ. ಆದರೆ ನಾ ಕುಳಿತಿದ್ದ ಸಾಲಿನಲ್ಲೇ ಕುಳಿತಿದ್ದ ಅಧ್ಯಕ್ಷರು ಎದ್ದು ನಿಂತರು. ಕರೆದೊಯ್ಯಲು ನನ್ನ ಬಳಿಗೆ ಹೆಜ್ಜೆ ಹಾಕುತ್ತಾರೆಂದು ಕಾದರೆ ನಿಂತೇ ಇದ್ದಾರೆ! ನನಗೆ ದಿಕ್ಕು ತೋಚದಂತಾಯಿತು. ಇದೇನಿದು ಅಧ್ಯಕ್ಷರನ್ನು ನಾನೇ ಕರೆದೊಯ್ಯಬೇಕಾ ಹೇಗೆ ಎನಿಸಿ, ಅವರು ನಿಂತಿದ್ದೆಡೆಗೆ ನಾನೇ ಹೆಜ್ಜೆ ಹಾಕಿದೆ. ಆಗಲೂ ಅಧ್ಯಕ್ಷರ ಚಲನವಿಲ್ಲ ನಿಂತೇ ಇದ್ದಾರೆ. ನಾನೇ ಅವರ ಪಕ್ಕ ಹೋಗಿ ನಿಂತಾಗಲೂ ಮಿಸುಕಾಡಲಿಲ್ಲ. ಕಡೆಗೆ ನೀಳವಾಗಿ ಜೋತುಬಿದ್ದಿದ್ದ ಅವರ ಕೈಯನ್ನು ನಾನೇ ಹಿಡಿದೆತ್ತಿ ಹಸ್ತಲಾಘವಕೊಟ್ಟೆ. ಬಹುಶಃ ಸೂಕ್ಷ್ಮಮತಿಗಳಾದ ಸಭಿಕರ್‍ಯಾರಾದರೂ ಇದ್ದರೆ ಇದನ್ನೆಲ್ಲಾ ಗಮನಿಸಿರುತ್ತಾರೆನಿಸಿತು. ಕಡೆಗೆ ಆಭಾಸವಾಗದಿರಲೆಂದು ಚುರುಕಾದ ನಾನೇ ಅವರನ್ನು ವೇದಿಕೆಯ ಮೇಲೆ ಕರೆದೊಯ್ದು ಕುಳ್ಳಿರಿಸಿದೆ. ಅರೆ, ಇದೇನಿದು ಇವರು ನನ್ನನ್ನು ಕರೆದೊಯ್ಯಬೇಕಾ, ಇಲ್ಲವೇ ನಾನೇ ಇವರನ್ನು ಕರೆದೊಯ್ಯಬೇಕಾ? ಸಂಶಯ ಕಾಡತೊಡಗಿತು. ಇದೊಂದು ಹೊಸ ಬಗೆಯ ಸಂಪ್ರದಾಯವೇ?

ಮುಖ್ಯ ಅತಿಥಿಗಳ ಬಗ್ಗೆ ನಮ್ಮ ಅಧ್ಯಕ್ಷರು ಎರಡು ಮಾತಿನಲ್ಲಿ ಪರಿಚಯಿಸಬೇಕೆಂದು ಕಾರ್ಯದರ್ಶಿ ಕೇಳಿಕೊಂಡರು. ಸಾಮಾನ್ಯವಾಗಿ ಕಾರ್ಯದರ್ಶಿಯೇ ಪರಿಚಯ ಮಾಡಬೇಕಿತ್ತು. ಆದರೆ ಅದೇಕೋ ಇಲ್ಲಿಯ ಕಾರ್ಯಕ್ರಮವೆಲ್ಲಾ ತಿರುವು - ಮುರುವಾಗಿ ನಡೆಯತೊಡಗಿತು.

ಅಧ್ಯಕ್ಷರು ನನ್ನ ಪಕ್ಕದ ಕುರ್ಚಿಯಲ್ಲಿ ಮಿಸುಕಾಡದೆ ಕುಳಿತೇ ಇದ್ದರು - ಕಾರ್ಯದರ್ಶಿ ಹೇಳಿದ ನಂತರವೂ. ಕಡೆಗೆ ನಾನೇ ಎದ್ದು ನಿಂತೆ. ''ಅಧ್ಯಕ್ಷರೇ ಕಲಾಭಿಮಾನಿಗಳೇ - ಎಂದು ಪ್ರಾರಂಭಿಸಿ, ಇಂದು ನನ್ನನ್ನು ಮುಖ್ಯ ಅತಿಥಿಯಾಗಿ ಎರಡು ಮಾತನಾಡಲು ಕರೆದುದಕ್ಕೆ ಕೃತಜ್ಞತೆ ಅರ್ಪಿಸಬೇಕಿದೆ. ಆದರೆ ಇದಕ್ಕೆ ಮುಂದೆ ಇಂದಿನ ಸಭೆಯನ್ನಲಂಕರಿಸಿರುವ ಶ್ರೀಮಾನ್... ರವರು ತಮ್ಮ ಕಾರ್ಯಾಬಾಹುಳ್ಯದಿಂದ ಅಧ್ಯಕ್ಷತೆ ವಹಿಸಲು ಒಪ್ಪಿರುವುದೇ ನಿಮ್ಮೆಲ್ಲರ ಸುಕೃತವೆಂದು ಹೇಳಬಹುದು. ಇವರು ಸಂಸ್ಥೆಯ ಅಧ್ಯಕ್ಷರಾಗಿ ಸುಮಾರು ವರ್ಷದಿಂದ ಸಾಂಗೋಪಾಂಗವಾಗಿ ನಿರ್ವಹಿಸಿಕೊಂಡು ಹೋಗುತ್ತಿರುವುದು ನೋಡಿದರೆ ಬಹುಶಃ ಇವರ ಜೀವನ ಪೂರ್ತಾ ಅಧ್ಯಕ್ಷರಾಗೇ ಮುಂದುವರೆಯಲು ಯಾರೂ ಅಡ್ಡಿಯನ್ನುಂಟು ಮಾಡುವುದಿಲ್ಲವೆಂದೇ ನನ್ನ ಭಾವನೆ'' ಎಂದು ಹೇಳಿ ಅಧ್ಯಕ್ಷರ ಕಡೆ ತಿರುಗಿದೆ. ಬಹುಶಃ ಯಾರೂ ಈ ರೀತಿ ಹೊಗಳಿರಲಿಲ್ಲವೆಂದು ಕಾಣುತ್ತೆ. ಈ ನನ್ನ ಮಾತಿಗೆ ಚಪ್ಪಾಳೆ ಹೊಡೆಯತೊಡಗಿದರು. ಅಧ್ಯಕ್ಷರೇ ಹೊಡೆದ ಮೇಲೆ ಕೇಳಬೇಕೆ ಸಭೆ ಅವರ ಜೊತೆ ಚಪ್ಪಾಳೆ ಸದ್ದಿನಲ್ಲಿ ಸೇರಿಕೊಂಡಿತು.

ಸಂಸ್ಥೆಯ ರೂಪರೇಷೆಯ ಬಗ್ಗೆ, ಕಾರ್ಯ ಕಲಾಪದ ಬಗ್ಗೆ, ಸಂಸ್ಥೆಯ ಸಾಮಾಜಿಕ ಕಳಕಳಿಯ ಬಗ್ಗೆ ಹೀಗೆ ಏನೇನೋ ಮಾತನಾಡಿದೆ. ನಾನು ಪ್ರಿಪೇರಾಗಿದ್ದೆಲ್ಲಾ ಇಲ್ಲಿ ಉಪಯೋಗಕ್ಕೆ ಬರಲೇ ಇಲ್ಲ. ಆದರೂ ಸಂಸ್ಥೆಯ ಒಂದೊಂದು ಕೆಲವನ್ನು ಹೈಲೈಟ್ ಮಾಡಿದಾಗಲೂ ಅಧ್ಯಕ್ಷರಾದಿಯಾಗಿ ಚಪ್ಪಾಳೆಯ ಸುರಿಮಳೆಯಾಗುತ್ತಿತ್ತು. ಇನ್ನು ನನ್ನ ಮುಖ್ಯ ಅತಿಥಿಯ ಭಾಷಣದ ವಿಷಯ ಯಾರಿಗೆ ತಾನೇ ಬೇಕು ಹೇಳಿ?

ಕಡೆಗೆ ಅಧ್ಯಕ್ಷರ ಭಾಷಣ ಎಂದು ಕಾರ್ಯದರ್ಶಿ ಘೋಷಿಸಿದರು. ಅಧ್ಯಕ್ಷರು ಒಂದು ರೀತಿಯ ಜಡಭರಿತ ಸ್ಥಿತಿ ತಲುಪಿದ್ದರು. ಈಗ ಹೇಗೂ ಮುಕ್ಕಾಲು ಮೂರುಭಾಗ ಅವರ ಕೆಲಸವನ್ನು ನಾನೇ ಮುಗಿಸಿರುವುದರಿಂದ ಅವರಿಗೇಕೆ ತೊಂದರೆ ಕೊಡಬೇಕೆಂದು ನಾನೇ ಎದ್ದು ನಿಂತೆ. ಪುನಃ ಚಪ್ಪಾಳೆ ಸದ್ದು. ಬಹುಶಃ ಅಧ್ಯಕ್ಷರು ಮಾತನಾಡದಿದ್ದರೆ ಸಾಕು ಎಂಬ ಭಾವನೆಯೋ ಅಥವಾ ನಾನು ಮಾಡಿದ ಭಾಷಣದ ಪ್ರಭಾವವೋ ತಿಳಿಯದಂತಾಗಿತ್ತು.

ಅಧ್ಯಕ್ಷರು ಈಗಾಗಲೇ ಹಲವಾರು ಕೆಲಸಗಳನ್ನು ಅಡೆತಡೆಯಿಲ್ಲದೆ ನಿರ್ವಹಿಸಿರುವುದರಿಂದ ಅವರಿಗೆ ಸಭೆ ತೊಂದರೆ ಕೊಡುವುದಿಲ್ಲವೆಂದು ಭಾವಿಸುತ್ತೇನೆ. ''ಹೇಗೂ ಅವರೇ ಈ ಸಂಸ್ಥೆಯ ಪೋಷಣೆ ಮಾಡುತ್ತಿರುವುದರಿಂದ ಅವರು ಮಾತಿಗೆ ಮನ್ನಣೆ ಹಾಕುವವರಲ್ಲವೆಂದು ಕಾಣುತ್ತೆ. Talk less more work ಮಾದರಿಯ ಜೀವಿ ಇರಬಹುದು.

ಆದ್ದರಿಂದ ಅವರಿಗೆ ದೇವರು ಆಯುರಾರೋಗ್ಯ ಸೂರ್ಕಾಲ ಕೊಡಲೆಂದು ಪ್ರಾರ್ಥಿಸುತ್ತೇನೆ'' ಎಂದಾಗ ಅಧ್ಯಕ್ಷರು ಹುಚ್ಚೆದ್ದು ಕರತಾಡನ ಮಾಡಿದಾಗ ಇನ್ನು ಸಭೆಯಲ್ಲಿ ಕೇಳಬೇಕೆ? ಹತ್ತು ನಿಮಿಷ ಚಪ್ಪಾಳೆ ಜಡಿಮಳೆ.

ನಂತರ ಚಪ್ಪಾಳೆ ಸದ್ದು ತಹಬಂದಿಗೆ ಬಂದ ನಂತರ ''ಮುಖ್ಯ ಅತಿಥಿಗಳಿಗೆ ದಯವಿಟ್ಟು ಈ ಪುಷ್ಪಹಾರವನ್ನು ಅರ್ಪಿಸಬೇಕೆಂದು ಅಧ್ಯಕ್ಷರನ್ನು ಕೇಳಿಕೊಳ್ಳುತ್ತೇನೆ ಎಂದು ಕಾರ್ಯದರ್ಶಿಗಳು ನುಡಿ ಉದುರಿಸಿದರು.



ಆಗಲೂ ಅಧ್ಯಕ್ಷರು ಮಿಸುಕಾಡಲಿಲ್ಲ. ನಾನೇ ಎದ್ದು ನಿಂತೆ, ಹಾರವನ್ನು ಕಾರ್ಯದರ್ಶಿಯವರು ನನ್ನ ಕೈಗೇ ಕೊಟ್ಟರು. ಸಂದಿಗ್ಧಕ್ಕೆ ಬಿದ್ದೆ. ನಾನೇ ಹಾಕಿಕೊಂಡು ಬಿಡಲೋ, ಇಲ್ಲ ಅಧ್ಯಕ್ಷರಿಗೆ ಹಾಕಿಬಿಡಲೋ? ಏಕೆಂದರೆ ಸಂಜೆ ಕಾರ್ಯಕ್ರಮ ಪ್ರಾರಂಭವಾದಾಗಿನಿಂದಲೂ ಒಂದು ರೀತಿ ವ್ಯತಿರಿಕ್ತವಾಗಿ ನಡೆಯುತ್ತಾ ಬಂದಿದೆ. ಬಹುಶಃ ಇದೂ ಸಂಪ್ರದಾಯವೇ ಈ ಸಂಸ್ಥೆಯದು? ಕಡೆಗೆ ಅಧ್ಯಕ್ಷರಿಗೆ ಹಾರ ಹಾಕಿಬಿಡುವುದೆಂದು ನಿರ್ಧರಿಸಿದೆ. ಆದರೆ ಕಾರ್ಯದರ್ಶಿಯವರ ಬಳಿ ಹೋಗಿ ಹಾರ ಪಡೆದೆ. ಮತ್ತೊಂದು ಸಂದಿಗ್ಧ ಎದುರಾಯಿತು. ಕಾರ್ಯದರ್ಶಿಯವರು ಅದೇನೋ ಕೈಯಲ್ಲೊಂದು ಕವರ್ ಹಿಡಿದಿದ್ದು ನೋಡಿ ಎದೆ ಧಸಕ್ಕೆಂದಿತು. ಏಕೆಂದರೆ ಬಹುಶಃ ಸಂಭಾವನೆ ಕವರ್ ಇರಬೇಕು. ಅದನ್ನು ಅಧ್ಯಕ್ಷರಿಗೇ ಒಪ್ಪಿಸಿಬಿಡುವುದೆಂದರೆ!

ಅದೇನೋ ಹೇಳುತ್ತಾರಲ್ಲ ಹಾಗೇ! ಪ್ರಶಸ್ತಿಯ ಜೊತೆ ಹಣ ನೀಡಿದಾಗ ಕೆಲವು ಹಿರೇ ಸಾಹಿತಿಗಳು ಅದೇ ಸಂಸ್ಥೆಗೆ ದಾನ ಮಾಡಿಬಿಡುತ್ತಾರಲ್ಲ ಅದೇ ರೀತಿಯಾದರೇ?

ಕಡೆಗೆ ಸದ್ಯ ಕಾರ್ಯದರ್ಶಿಗೆ ಅದೇನು ದೇವರು ಬುದ್ಧಿಕೊಟ್ಟನೋ ಕೈಲಿದ್ದ ಕವರನ್ನು ನನ್ನ ಜೇಬಿಗೆ ತುರುಕಿ ಪುಷ್ಪಹಾರವನ್ನು ಕೈಗಿತ್ತರು. ತೃಪ್ತಿಯಿಂದ ಈಗ ಆ ಹಾರವನ್ನು ಅಧ್ಯಕ್ಷರ ಕುತ್ತಿಗೆಗೆ ಏರಿಸಲು ಹೊರಟೆ. ನಾನು ಹಾರ ಹಾಕುವ ಮುಂಚೆಯೇ ಚಪ್ಪಾಳೆ ಹೊಡೆದು ಕುರಿಯಂತೆ ತಲೆ ತಗ್ಗಿಸಿ ನಿಂತರು. ಕಡೆಗೆ ಹಾರವನ್ನು ಅವರ ಕುತ್ತಿಗೆಗೆ ಹಾಕಿದೆ. ಸಭೆ ಚಪ್ಪಾಳೆಯಲ್ಲಿ ಮುಳುಗಿಹೋಯಿತು. ಈ ಸದವಕಾಶವನ್ನುಪಯೋಗಿಸಿಕೊಂಡು ಅಧ್ಯಕ್ಷರು ಎರಡು ಮಾತನಾಡಿದರು. ರೈಲಿನ ಸದ್ದಿನಲ್ಲಿ ಮಾತುಗಳು ಕರಗಿ ಹೋಗುವಂತೆ ಯಾರಿಗೂ ಅಷ್ಟೇಕೆ ನನಗೂ ಏನೂ ಕೇಳಲಿಲ್ಲ. ಅಂತೂ ಕಾರ್ಯಕ್ರಮ ಮುಗಿಯಿತು.

ಇನ್ನೂ ಅಧ್ಯಕ್ಷರನ್ನು ನಾನೇ ಮನೆ ಮುಟ್ಟಿಸುವ ಜಬಾಬ್ದಾರಿಯೂ ನನ್ನ ಹೆಗಲಿಗೆ ಬೀಳುತ್ತೆ ಎಂದು ಹೆದರಿದೆ. ಸದ್ಯ ಹಾಗಾಗಲಿಲ್ಲ. ಕಾರು ಬಂತು, ಹತ್ತಿ ಹೊರಟೆ. ಅಂತೂ ವಿಚಿತ್ರ ರೀತಿಯಲ್ಲಿ ಮುಖ್ಯ ಅತಿಥಿಯಾಗಿ ವಿಕ್ರಮ ಸಾಧಿಸಿಬಿಟ್ಟಿದ್ದೆ.



ಇವರಿಗೆ ವ್ಯಾಯಾಮ ಬೇಕು ಅಂತ ಡಾಕ್ಟರ್ ಹೇಳಿದಾರೆ.
ಅದಕ್ಕೆ ಟಿ.ವಿ. ರಿಮೋಟ್ನ ದಿನಕ್ಕೆ ಮೂರುಸಲ ಬಚ್ಚಿಡ್ತೀನ್ರಿ.

# ಸುಖನಿವಾಸದಲ್ಲೊಬ್ಬ 'ಮೇರಾ ನಾಂ...'

– ಎಸ್ಸಾರ್ಮೂರ್ತಿ

'ಸುಖನಿವಾಸ'ದ ಮುಖಾವತಾರದ ಅವಸ್ಥೆಯನ್ನು ಅಚ್ಚರಿಯಿಂದ ಆಳೆಯುತ್ತಿದ್ದ ರಂಗಣ್ಣನಿಗೆ ದೆವ್ವಗಳ ಇರವಿನ ಬಗ್ಗೆ ಈ ರಾತ್ರಿ ಖಂಡಿತ ಉತ್ತರ ದೊರಕಬಹುದೆನಿಸಿತು. ಟೀಮಿನ ಉಳಿದವರು ಅಭ್ಯಾಸ ಬಲವೆಂಬಂತೆ ತಮ್ಮ ತಮ್ಮ ಹಾಗೂ ಚಿತ್ರೀಕರಣದ ಪರಿಕರಗಳನ್ನು ಒಳಕ್ಕೆ ಸಾಗಿಸಿದರು. ಅಲ್ಲದೆ ಕೆಲವೇ ನಿಮಿಷಗಳಲ್ಲಿ ಓಬೀರಾಯನ ಕಾಲದ ಮರದ ಕಂಭಗಳಿದ್ದ ದೊಡ್ಡ ಹಾಲನ್ನು ರೆಫ್ಯೂಜಿ ಕ್ಯಾಂಪಾಗಿ ಯಶಸ್ವೀ ಪರಿವರ್ತನೆ ಮಾಡಿಕೊಂಡರು. ಬೀಡಿ ಸಿಗರೇಟುಗಳನ್ನು ಕಚ್ಚಿದ ಕೆಲವರಂತೂ ನಿರಾತಂಕವಾಗಿ ಗೋಡೆ, ಕಂಭಗಳಿಗೊರಗಿ ಅರ್ಧಶಯ್ಯಾಸನದಲ್ಲಿ ಕೂತೋ, ಮಲಗಿಯೋ ವಿರಮಿಸುತ್ತ ಮುರುಕು ಹೆಂಚುಗಳ ನಡುವೆ ಓಡಾಡುವ ಹಲ್ಲಿಗಳನ್ನೆಣಿಸಿದರು. ಹಲವು ಹೆಂಗಳೆಯರು ಬಾತ್‌ರೂಮುಗಳನ್ನು ಹುಡುಕಿಕೊಂಡು ಓಡಾಡಿದರು.

ಇಷ್ಟೆಲ್ಲಾ ಚಟುಟಿಕೆಗಳ ನಡುವಿನಲ್ಲಿ ನಿಷ್ಕ್ರಿಯನಾಗಿ ನಿಂತ ರಂಗಣ್ಣನನ್ನು ನೋಡಿ ಜುಗುಪ್ಸೆಯಿಂದ ತಿವಿದಳು ಸರಸು: 'ಏನ್ರೀ, ಶಿವಲಿಂಗದ ಮುಂದಿನ ಬಸವನ ಹಾಗೆ ನಿಂತ್ಬಿಟ್ರಲ್ಲಾ, ನಡೀರಿ... ಎಲ್ಲರ ಹಾಗೆ ಒಳಗೆ ಹೋಗೋಣ' ಎಂದು ಸೂಟ್ ಕೇಸಿಗೆ ಕೈ ಹಾಕಿದಳು.

ಅದ್ಭುತವಾದ ಲಕ್ಸುರಿ ಪ್ರಯಾಣದ ನಂತರ ಮೂಳೆಗಳು ನೆಗ್ಗಿದ್ದರೂ ರಂಗಣ್ಣನಿಗೆ ಒಂದು ಜೋಕ್ ಹೊಡೆಯಬೇಕೆನ್ನಿಸಿತು. ಆಗಾಗ್ಗೆ ಉದ್ಭವಿಸುತ್ತಿದ್ದ ಇಂತಹ ಸ್ಫೂರ್ತಿಯ ಫಲವಾಗಿ ಒಮ್ಮೊಮ್ಮೆ ಜೋಕ್ ಕಟ್‌ಮಾಡಿ, ಹೆಂಡತಿಯನ್ನು ರೇಗಿಸಿದ್ದರ ಪರಿಣಾಮ ಹಲವಾರು ದಿನ ಬಾಲ ಮುದುರಿ ಕೂರುವುದೂ ಅವನಿಗೆ ರೂಢಿಯೇ!

'ಸರಸೂ, ಈ ಬಂಗ್ಲೆ ನೋಡಿದರೆ ಯಾಕೋ ನಿಮ್ಮಪ್ಪ ದೊಡ್ಡಬಳ್ಳಾಪುರದಲ್ಲಿ ನಮ್ಮ ಮದುವೆಗೆ ಗೊತ್ಮಾಡಿದ್ನಲ್ಲಾ ಗೋಡೌನು, ಅದರ ಜ್ಞಾಪಕ ಬರುತ್ತೆ ಕಣೇ' ಎಂದುಬಿಟ್ಟ. ತಕೋ, ಜ್ವಾಲಾಮುಖಿ ಭುಗಿಲೆದ್ದು ಸಿಡಿದು ತನ್ನಪ್ಪನ ಡಿಫೆನ್ಸ್‌ನಲ್ಲಿ ಲಾವಾರಸ ಕಾರತೊಡಗಿತು. ಆಸ್ಫೋಟದ ಅಂತ್ಯದಲ್ಲಿ ಅವನಿಗೆ ಕೇಳಿಸಿದ್ದು ಇಷ್ಟೇ: ''ನಿಮ್ಮ ಮುಖಕ್ಕೆ ಅದಕ್ಕಿಂತ ಬೆಟರ್ ಆಗಿರೋ ಜಾಗ ಬೇಕಾಗಿತ್ತಾ?... ಆ ಗೋಡೌನೇ ಹೆಚ್ಚಾಯಿತು''

'ಆ ನನ್ನ ಮುಖಾ ನೋಡಿ ಅಲ್ವೇನೇ ಈಗ ಗುಂಡ ಪಾರ್ಟಿ ಕೊಟ್ಟಿರೋದು, ಸೀರಿಯಲ್ ಸ್ಟಾರ್ ಆಗೋಕೆ ನೀನೂ ಇಲ್ಲಿರೋದು?'

ಗಂಡ ಹೆಂಡಿರು ಹೆಚ್ಚು ಕದನ ಕುತೂಹಲರಾಗದಂತೆ ಅದೃಷ್ಟವಶಾತ್ ಶಿವಾಜಿ, ಶೇಖರ್ ಮಧ್ಯೆ ಪ್ರವೇಶಿಸಿ ಷೋಡಾನಿಗೆ ಬರುತ್ತಿದ್ದ ಈ ಸರಸರಂಗಾಯಣವನ್ನು 'ಬ್ರೇಕ್‌ಕೆಬಾದ್' ಎಂದು ಬ್ರೇಕು ಹಾಕಿ ತಡೆದರು. ಶೇಖರ 'ಇಲ್ಲಿ ಕೊಡಿ, ಅಮ್ಮ' ಎಂದು ಸರಸೂ ಕೈಯಿಂದ ಸೂಟ್‌ಕೇಸ್ ಕಿತ್ತುಕೊಂಡ, 'ಒಂದು ಕೋನೇಲಿ ನಿಮ್ಮಿಬ್ಬರಿಗೂ ರಿಸರ್ವೇಷನ್ ಮಾಡಿದೀನಿ ಸಾರ್ ನಡೀರಿ ಒಳಗೆ' ಎಂದು ಗೌರವಸೂಚಕವಾಗಿ ಆಮಂತ್ರಿಸಿದ. ಸರಸು ಕೈಚೀಲ, ಪರ್ಸು ಹಿಡಿದು ವಟಗುಟ್ಟುತ್ತಲೇ ಒಳಗೆ ನಡೆದಳು. ರಂಗಣ್ಣ ಸೇಫ್ ಆಗಿ 'ಫಾಲೋ ಆನ್' ಮಾಡಿದ.

ಪ್ರೊಫೆಸರ್ ಸಾಹೇಬರಿಗೋಸ್ಕರ ಒಂದು ಒಳ್ಳೆಯ ಚಾಪೆಯನ್ನು ಹೊಂದಿಸಿ ಮೂಲೆಯಲ್ಲಿ ಉರುಳಿಸಿ ಮೇಲೆ ಹಳೆಯ ಜಮಖಾನೆಯನ್ನೂ ಹಾಸಿಕೊಟ್ಟು ಶೇಖರ 'ಸಾರ್, ಏನು ಕೆಲಸ ಇದ್ರೂ, ನನಗೆ ಹೇಳಿ.... ನೀವೂ ತೊಂದರೆ ಮಾಡಿಕೋಬೇಡಿ ಅಮ್ಮ, ನಿಮಗೆ ಇದೆಲ್ಲಾ ಅಭ್ಯಾಸ ಇರೊಲ್ಲ... ಇಲ್ಲೇ ಮುಂದುಗಡೆ ಇರ್ತೀನಿ' ಎಂದು ಹೇಳಿದ. ಈ ಸೇವೆ, ಆಶ್ವಾಸನೆಗಳಿಂದ ಸರಸೂ ಕೋಪದ ಜ್ವಾಲೆ ಸ್ವಲ್ಪ ಇಳಿದರೂ, ರಂಗಣ್ಣನ ಮೇಲೆ ಸುಪ್ರಸನ್ನಳಾಗಲು ಬಿಗುಮಾನ ಅಡ್ಡಹಾಕಿತು, 'ಇವನು ಬೇರೆ, ಹನುಮಂತ... ರಾಮದೇವರ ಸೇವೆಗೆ... ಏನಾದರೇನು, ಸೀತೆಗೆ ತಾನೇ ವನವಾಸದ ಕಷ್ಟ?' ಎಂದು ರಂಗಣ್ಣನ ಮೇಲೆ ಸಿಡಿಮಿಡಿಯಾಗಿಯೇ ಇದ್ದಳು.

'ಸರಸೂ, ಇದೇ ಫಸ್ಟ್‌ಟೈಮು ಅಂತ ಕಾಣುತ್ತೆ ಕಣೆ, ಸೀತೇನೇ ರಾಮನ್ನ ಹೆದರಿಸಿ ವನವಾಸಕ್ಕೆ ಓಡಿಸಿಕೊಂಡು ಹೋದದ್ದು' ಎಂದವನೇ ಮುಂಬಾಗಿಲಿನತ್ತ ಓಡಿಬಿಟ್ಟ ರಂಗಣ್ಣ, ಮತ್ತೊಂದು ಚಟಾಕಿ ಹರಿಸಿ ಸರಸೂಗೆ ಕೋಪದ ಜೊತೆ ಅನುಮಾನಾನೂ ಬಂತು 'ಇದೇನು, ಇವತ್ತು ಇಷ್ಟೊಂದು ಎದುರು ಮಾತಾಡ್ತಾ ಇದಾರೆ, ನಿಜವಾಗಲೂ ಈ ಮನೇಲಿ ದೆವ್ವ ಗಿವ್ವ...' ಮುಂದಕ್ಕೆ ಅವಳಿಗೆ ಯೋಚಿಸಲೂ ಹೆದರಿಕೆ ಆಯ್ತು. ಇದುವರೆಗೆ ತಾನು ಪತಿದೈವನಿಗೆ ಬಾಲ ಬಿಚ್ಚಲು ಹೇರಳವಾಗಿ ಅವಕಾಶಗಳನ್ನೇನೂ ದಯಪಾಲಿಸಿಲ್ಲ ಎಂಬುದು ಅವಳಿಗೆ ಹೊಳೆಯಲೇ ಇಲ್ಲ.

ಆ ವೇಳೆಗೆ ರುಸಿಂಗ ಪಕ್ಕದ ಅಂಗಳದಲ್ಲಿ ತನ್ನ ಕಿಚನ್ ಎಸ್ಟಾಬ್ಲಿಷ್ ಮಾಡಿಕೊಂಡಿದ್ದ. ಸರಸು ಒಬ್ಬಾಕೆಯನ್ನು ಮಾತನಾಡಿಸಿ ಬಾತ್‌ರೂಂ ಲೊಕೇಷನ್ ತಿಳಿದುಕೊಂಡಳು. ಸೂಟ್‌ಕೇಸಿಂದ ಟವಲು, ಸೋಪು, ಪರ್ಸಿಂದ ಬಾಚಣಿಗೆ, ಪೌಡರ್ ಇತ್ಯಾದಿಗಳನ್ನು ತೆಗೆದುಕೊಂಡು ಬಾತ್‌ರೂಂ ಶಾಸ್ತ್ರವನ್ನು

ಮುಗಿಸಲು ಯತ್ನಿಸಿದಳು. ಆದರೆ ಒಳಗೆ ಹೋದಾಗ ಹೆಚ್ಚು ಶುಭ್ರವಾಗಿದ್ದಳೋ ಅಥವಾ ಹೊರಗೆ ಬಂದಾಗಲೋ ಎಂಬುದು ಅವಳಿಗೇ ತಿಳಿಯಲಿಲ್ಲ. ಆ ಏರಿಯಾದ ಹತ್ತಿರ ಹೋದಾಗ ಮೂಗಿನ ಮೇಲಿಟ್ಟ ಕೈ ತೆಗೆದದ್ದು ಹರಳೆಣ್ಣೆ ಮುಖ ಮಾಡಿಕೊಂಡು ಹಾಲಿಗೆ ಮರಳಿದಾಗಲೇ! ಆ ಗಾಂಧಿ ಏನಾದರೂ ಉಪವಾಸ ಸತ್ಯಾಗ್ರಹ ಕಲಿಸಿದ ಹಾಗೆ 'ಶೌಚ ಸತ್ಯಾಗ್ರಹ' ಅಂತ ಹೇಳಿಕೊಟ್ಟಿದ್ದರೆ ಅತ್ಯಂತ ಸಂತೋಷದಿಂದ ಅದನ್ನು ತಪ್ಪದೇ ಪಾಲಿಸಿಬಿಡುತ್ತಿದ್ದಳು ಸರಸು, 'ಸುಖನಿವಾಸಿ' ಯಾಗಿರುವವರೆಗೂ! ಪರಿಸ್ಥಿತಿ ಅಪರಾಧವಲ್ಲದಿದ್ದರೂ ಸ್ವಯಂಕೃತ! ಹಾಗಾಗಿ ರಂಗಣ್ಣನ ಮೇಲೂ ಏರಿ ಹೋಗುವ ಹಾಗಿಲ್ಲವೇ.... ಅಂತೂ ಕೋಪವನ್ನು ನುಂಗಿಕೊಳ್ಳದೇ ವಿಧಿಯಿರಲಿಲ್ಲ.

ಈ ಮೊದಲೇ ಬಾಗಿಲವರೆಗೆ ಹಾಪ್‌ಸ್ಟೆಪ್ ಅಂಡ್ ಜಂಪ್ ಮಾಡಿದ್ದ ರಂಗಣ್ಣ ಅಲ್ಲಿ ನಿಂತಿದ್ದ ಶಿವಾಜಿರಾವ್, ಶೇಖರ ಇವರ ಮಧ್ಯೆ ಲ್ಯಾಂಡ್ ಆದ. ತಾನು ಬಂದಿಳಿದ ರೀತಿಯ ಬಗ್ಗೆ ಪ್ರಶ್ನಾರ್ಥಕಗಳನ್ನು ಮರೆಮಾಚಲು ಕ್ಯಾಷುಯಲ್ ಆಗಿ ಗುಂಡಣ್ಣನ ಅರೈವಲ್ ಬಗ್ಗೆ ವಿಚಾರಿಸಿ.

'ಅವರು ತುಂಬಾ ಬಿಜ಼ಿ ಅಂದ್ಕೊಳಿಸಾರ್. ಈಗ ಸಧ್ಯದಲ್ಲಿ ನಿಮ್ಮ ಫ್ರೆಂಡು ಗುಂಡೇಶ್ ಅವರು, ಅವರ ಗುಂಡು ಫ್ರೆಂಡೇಶುಗಳ ಜೊತೆ ಬ್ರಾಂಡು ಬಾಟ್ಲಿಗಳನ್ನ ಖಾಲಿ ಮಾಡ್ತಾ ಬಾರಲ್ಲಿ ಬಲೇ ಬಿಜ಼ಿಯಾಗಿರ್ತಾರೆ ಸಾರ್' ಶೇಖರ್ ವಿವರಣೆ ನೀಡಿದ. ಜೊತೆಗೆ ಈ ಸಲ ಸೇಟೂ ಬಂದಿದಾರಂತೆ'.

'ಲೋ ಜೋಕರ್ರು', ಶಿವಾಜಿ ಹೇಳಿದ, 'ಹೌದಂತೋ, ವೇಲು ವರ್ತಮಾನ ಏನೋ ಹೊಸಾ ಬಿಸಿನೆಸ್ಸು ಮಾಡೋಕೆ ಅಂತ ಕಾಣ್ತದೆ, ಶ್ರವಣಬೆಳಗೊಳಕ್ಕೆ ಹೋಗಿ ಪೆಷಲ್ ಪೂಜೆ ಮಾಡಿಸಿಕೊಂಡು ಬಂದ್ರಂತೆ.'

'ಸರಿಯಾಗವೆ ರಾವ್‌ಜಿ.... ಒಂದು ಕತ್ರಿ, ಒಂದು ಚಾಕು... ಇಂತಾ. ಜನಕ್ಕೆ ಹೆದರಿ ಆ ದೇವರು ಬೆಟ್ಟದ ಮೇಲೆ ಓಡಿಹೋಗಿ ನಿಂತರೂ ಇವರ ಕಾಟ ತಪ್ಲಿಲ್ಲ. ಇನ್ನೊಂದು ವಿಷ್ಯ... ನಿಮಗ್ಗೊತ್ತಾ.... ಬಟ್ಟೆ ಮಾಡೋ ಮಿಲ್‌ಗಳೆಲ್ಲಾ ಯಾಕೆ ಅಮದಾಬಾದು, ಗುಜರಾತು, ಜೈಪುರ ಕಡೆ ಇರೋದು?'

'ಹತ್ತಿ ಬೆಳೆಯೋ ಕಡೆ ಮಿಲ್‌ಗಳು ಇರುತ್ವೆ'

'ಅಂಗಲ್ಲ ಸಾರ್... ದ್ರೌಪದಿ ಸೀರೇನ ದುಸ್ಸಾಸನ ಎಳೆದಾಗ ಪರಮಾತ್ಮ ವರ ಕೊಡ್ಲಿಲ್ವಾ, ಈ ಸೇರೆ ಮುಗಿಯೋದೇ ಬೇಡ ಅಂತ? ಹಾಗೇ ಈ ದೇವರು ತನ್ನ ಬಿಟ್ಟೆ ಎಲ್ಲಾ ಬಿಚ್ಚಿ ಬಿಸಾಕಿ ಭಕ್ತರಿಗೆ ಹೇಳಿದ್ನಂತೆ ಸಾರ್, ಕಲಿಯುಗ ಇರೋವರ್ಗೂ ಈ ಬಗ್ಗೆ ಅಕ್ಷಯ ಆಗ್ಲಿ, ಅದನ್ನ ಮಾರಿ ನೀವು ದುಡ್ಡು ಮಾಡ್ಕಳಿ, ತನ್ನ ತಂಟೇಗೆ ಬರ್ಬೇಡಿ. ಅಂತ... ಅದ್ಕೇ ಜಾಸ್ತಿ ಆ ಭಕ್ತರು ಇರೋ ಕಡೆ ಮಿಲ್‌ಗಳೂ ಹುಟ್ಕೊಂಡವಂತೆ'

ಸರ್ವಸಂಗ ಪರಿತ್ಯಾಗಿಯಾದ ಬಾಹುಬಲಿಯ ಬಗ್ಗೆ ಈ ಜೋಕರಿನ ವ್ಯಾಖ್ಯಾನ ಕೇಳಿ ಏನು ಹೇಳಬೇಕೋ ತಿಳಿಯದೆ ನಮ್ಮ ರಂಗಣ್ಣ ಅವನಿಗೆ ಒಂದು ವಾರ್ನಿಂಗ್ ಸಹನೀಡಿದ:

''ಅಲ್ಲಪ್ಪಾ, ಅಂತಹ ಪರಿಪುಷ್ಪನ ಬಗ್ಗೆ ಹೀಗೆ ನೀನು ಮಾತಾಡಿದ್ದು ತಿಳಿದರೆ ಸುಮ್ಮನೆ ಬಿಡ್ತಾರಾ ಆ ಭಕ್ತರು ನಿನ್ನ, ಜೈಲಿಗೆ ಕಳಿಸ್ತಾರೆ.''

''ಅಯ್ಯೋ ಬಿಡಿ ಸಾರ್, ನಮ್ಮ ಕಡೆ ಭಕ್ತರೆಲ್ಲಾ ಹಂಗೆ 'ಫತ್ವಾ' ಸೋ ಏನೋ ಹೇಳ್ತಾರಲ್ಲ, ಅದು ಕೊಡಾಕಿಲ್ಲ. ಅಲ್ಲದೆ ನಮ್ಮ ಗೌರ್ಮೆಂಟ್ ಪ್ರಕಾರ ದೇವ್ರನ್ನ, ಮಂತ್ರಿಗಳ್ನ ಪೂಜೆ ಮಾಡೋಕೂ ಬೈಯ್ಯೋದಕ್ಕೂ ಪೂರ್ವ ಹಕ್ಕಿದೆ. ಈ ಎರಡೂ ತರ ಭಕ್ತರು ಯಾವಾಗಲೂ ಫಂಡ್ ಕಲೆಕ್ಷನ್‌ನಲ್ಲೇ ಬಿಜಿ ಇರ್‍ತಾರೆ; ಬೇರೆ ಯಾವುದಕ್ಕೂ ಅವರಿಗೆ ಟೈಂ ಎಲ್ಲಿರ್‍ತದೆ?

'ಜನಗಳೂ ಒಳ್ಳೇ ಉದ್ದೇಶ ಇಟ್ಕೊಂಡೇ ಅಲ್ಲವಾ ಸೇವೆ ಮಾಡೋದು?'

'ಹೌದ್ಹೌದು... ನಮ್ಮ ತಿರಿಪ್ತಿ ತಿಮ್ಮಪ್ಪ ಸ್ವಾಮೀಗೇ ಚಳಿ ಆಗಿ ಕೋಟು ಬೇಕಾಯ್ತಂತೆ. ಪಾಪ... ಬಾರೀ ದೇವ್ರು, ನೋಡಿ.... ವಜ್ರದ ಕೋಟು ಒಳ್ಳೇದು ಅನಿಸ್ತಂತೆ. ಅದಕ್ಕೇ ಅವನ ಭಕ್ತರೆಲ್ಲಾ ಕಾಡಿ, ಬೇಡಿ, ಭಿಕ್ಷಾ ಎತ್ತಿ, ಲಂಚಾ ಹೊಡೆದು, ಲೂಟಿ ದರೋಡೆನಾದರೂ ಮಾಡಿ ದುಡ್ಡು ಕಲೆಕ್ಟ್ ಮಾಡ್ತಾ ಇದಾರೆ, ನಂಗೇನಾದರೂ ಆ ದೇವ್ರು 'ಪ್ರಸಾದ' ಅಂತ ಎರಡು ವಜ್ರದ ಕಾಸು ತಕೋ ಅನ್ನೋ ಹಂಗಿದ್ರೆ ತಲೇ ಏನು! ಮೈಕೈಯೆಲ್ಲ ನುಣ್ಣಗೆ ಮಾಡಿಸ್ಕೊಂಡು ನಾಮ ಬಳ್ಕೊಂಡು ಚಿಕ್ಕ ಬೆಟ್ಟದ ಮೇಲೆ ನಿಂತ್ಬಿಡ್ತಿದ್ದೆ... ಅದರಲ್ಲಿ ನಮ್ಮಮ್ಮನ ಖಾಯಿಲಾ ಆದರೂ ವಾಸಿ ಆಗ್ತಿತ್ತೇನೋ!'

ಫಿಸಿಕ್ಸ್ ಲ್ಯಾಬೋರೇಟರಿಯಲ್ಲಿ ಭೌತ ಸಿದ್ಧಾಂತಗಳ ಮನನ ಮಾಡುವುದರಲ್ಲಿ ರಂಗಣ್ಣನ ಎಕ್ಸ್‌ಪರ್ಟೈಸ್ ಇತ್ತೇ ಹೊರತು ದೇವರು - ಭಕ್ತರ ನಡುವಣ ಸಂಬಂಧಗಳ ಬಗ್ಗೆ ರಿಸರ್ಚ್ ಮಾಡಿ ಥಿಯರಿ ಬರೆಯುವುದರಲ್ಲಲ್ಲ. ಆದರೂ ಈ ವಿಷಯ ಕುರಿತ ಜೋಕರಿನ ಮಂಡನೆ ವಿಚಾರಪೂರ್ಣವೆನಿಸಿತು ಅವನಿಗೆ.

ಯೋಚಿಸಲು ಅವಕಾಶವೀಯದಂತೆ ಶಿವಾಜಿ ಮಧ್ಯದಲ್ಲಿ ಬಾಯಿಹಾಕಿ, 'ಸಾಕೋ ಪುಣ್ಯಾತ್ಮ... ಈಗ ನೋಡು, ಊಟ ರಡಿ ಆಯ್ತು ಅಂತ ಕಾಣುತ್ತೆ. ಎಲ್ಲರೂ ಒಟ್ಟಿಗೆ ಊಟಕ್ಕೆ ಬರದೇ ಇದ್ದರೆ ಈ ರುಸಿಂಗ ಉರ್ಸಿಂಗ ಆಗ್ತಾನೆ. ಬನ್ನಿ ಸಾರ್, ಅಮ್ಮಾವರಿಗೂ ಹೇಳಬೇಕು' ಎಂದ.

ಹೌದು ಸಾರ್, ರುಸಿಂಗನ ಕೈ ಸಮಾ ಇಲ್ಲ. ಸ್ವಲ್ಪ ಬೆಳ್ಳುಳ್ಳಿ ಕಾರ ಕಮ್ಮಿ, ಆದರೆ ಕೇಳಿದಷ್ಟು ಈರುಳ್ಳಿ, ಹಸೀ ಮೆಣಸಿನಕಾಯಿ ಸಪ್ಲೆ ಕೊಡ್ತಾನೆ.

ಗುಂಡೇರೋರು, ಬಾಕಿ ಏನೇ ಇರಲಿ... ಊಟದ ವಿಷಯದಲ್ಲಿ ಮಾತ್ರ ಬೆಷ್ಟಾಗಿ ಅರೇಂಜ್‌ಮೆಂಟ್ ಮಾಡ್ತಾರೆ, ಅದಕ್ಕಾದರೂ ಜನ ಲೊಕೇಷನ್ ತಪ್ಪಿಸ್ಕೊಳಲ್ಲ ಸಾರ್, ನೀವು ಇಲ್ಲೇ ಕೈತೊಳ್ಕಳಿ... ಬಾತ್ ರೂಮಿಗೆ ಹೋಗಬೇಡಿ ಎಂದು ಓಡಿಹೋಗಿ ಒಂದು ಚೊಂಬಿನಲ್ಲಿ ಕೈ ತೊಳೆಯುವ ನೀರು ತಂದುಕೊಟ್ಟು ಸರಸು, ರಾವು ರಂಗಣ್ಣಾದಿಗಳನ್ನು ಭೋಜನಕ್ಕೆ ಸಿದ್ಧಗೊಳಿಸಿದ, ವಿಚಾರ ಚಿಂತಾಮಣಿ, ಕೋಲಾರದ ಅಪರಂಜಿ ಜೋಕರ್ ಶೇಖರ, ಸುಖನಿವಾಸದ ಅಂಗಳದಲ್ಲಿ.



## ಪ್ರೈಜ

ಪ್ರಿಯೆ
ನೀ ನನ್ನ ಬಾಳಿನಲಿ
ಥಟ್ಟನೆ ಬಂದು
ಹುಟ್ಟಿಸಿದ ಸರ್ಪ್ರೈಜ
ಈ ಭೂಮಿಯ ಮೇಲೆ
ನಾ ಪಡೆದ ಅತಿ ದೊಡ್ಡ ಪ್ರೈಜ!

– ಮಗು ಬಿರಾದಾರ

# ವಾಕ್ ಕಾಮ್!

- ಹಾ. ರಾ.

"Simply talk" ಮಾಡಿ ಅಂತ ಸಾರೋ ಸೆಲ್ಯೂಲರ್ ಕಂಪನಿಗಳ ಜಾಹಿರಾತು ಬೋರ್ಡ್‌ಗಳನ್ನೂ, "Simply walk" ಮಾಡಿ ಎನ್ನುವ ಸಂದೇಶ ಸಾರುವ ಇಂಡಿಯನ್ ಮೆಡಿಕಲ್ ಕೌನ್ಸಿಲ್ ಫಲಕಗಳನ್ನೂ ನೋಡಿದಾಗ ನನಗೆ ಸ್ವಲ್ಪ ಕಸಿವಿಸಿಯಾಯಿತು! ಏನೇ ಇರಲಿ "Simply walk" ಮಾಡಿ ಅಂತ ನಾನು ಖಂಡಿತ ಹೇಳಲಾರೆ! ಇಲ್ಲೇ ಇರೋದು ಜನರೇಷನ್ ಗ್ಯಾಪು! ಎರಡನ್ನೂ ಬೆಸೆದರೆ ವಾಕಿಂಗ್ ಸ್ವಾರಸ್ಯ ಹೊರ ಹೊಮ್ಮೋದು ಅಂದರೆ ವಾಕಿಂಗ್ ಜೊತೆ ಟಾಕಿಂಗ್ ಇರಲೇಬೇಕು, ಮೀಟಿಂಗ್ ಎಂದರೆ ಈಟಿಂಗ್ ಅನ್ನೋ ಹಾಗೆ!

ಬನ್ನಿ ಒಂದಿಷ್ಟು ವಾಕ್ ಮಾಡಿ - ನನ್ನ ವೆಬ್ ಸೈಟಿನಲ್ಲಿ!

ಓದಿ ಓದಿ ಕೂಚುಭಟ್ಟ ಆದೆಯಲ್ಲೋ ಅಂತ ನನ್ನ ಅಜ್ಜಿ ಹಳೇ ಕಾಲದಲ್ಲಿ ಹೇಳುತ್ತಿದ್ದರು. ಈಗ ಮೂರು ಹೊತ್ತೂ ಕಂಪ್ಯೂಟರ್ ಮುಂದೆ ಕೂತು ಕಣ್ಣಾಡಿಸುವ ನಮ್ಮ ಮನೆ ಕುಮಾರ ಕಂಠೀರವ ಮಹಾ ಇಂಟರ್‌ನೆಟ್ ಪ್ರಚಂಡ! ಅವನಿಗೆ ನಾನು ಈಗ 'ಕೂತು ಕೂತು ಕೂಚುಭಟ್ಟ ಆದೆಯಲ್ಲೋ' ಅಂತೀನಿ! ಇದನ್ನೇ ನಾನು ಜನರೇಷನ್ ಗ್ಯಾಪ್ ಅಂತ ಹೇಳಿದ್ದು. ಆಗ "Book worms' ಇರ್ತಾ ಇದ್ರು. ಈಗ ಬುಕ್ಕಿಲ್ಲ - ವರ್ಮ್ಸ್ ಇವೆ. ಅಂದರೆ ವೈರಸ್ ಇದೆ ಅಂತ ಅರ್ಥ. ಅಂತೂ ಕಂಪ್ಯೂಟರ್ ಮುಂದೆ ಕೂತು ವಾಕ್ ಮಾಡೋದು, How to swim? ಎಂಬ ಪುಸ್ತಕ ಓದಿ ಈಜು ಕಲಿಯೋದು ಹೊಸ ಜನರೇಷನ್ ತೋರಿಸಿರುವ ಪವಾಡಗಳು. ನಮ್ಮ ಮನೆ ಮುಂದೆ ಕಾನ್ವೆಂಟ್ ಪಿಲ್ಲೆಗಳು ಹೊರೆ ಹೊರೆ ಪುಸ್ತಕದ ಬ್ಯಾಗ್‌ಗಳನ್ನು ಬೆನ್ನಿಗೆ ತೂಗು ಹಾಕಿಕೊಂಡು Come man, go man, no man, yes man, ಅಂತ ಮಿರುಮಿರುಗುವ ನಾಲಿಗೆ ಅಂಚಿನಿಂದ ಹೊರ ಹೊಮ್ಮಿಸುವ ಮಾತುಗಳು ದಿನ ನಿತ್ಯ ನನ್ನ ಕಿವಿಗೆ ಬೀಳುತ್ತದೆ. ಅದೇ ಧಾಟಿಯಲ್ಲಿ ಆ ಮಕ್ಕಳಿಗೆ ನಾನು ಆಗಾಗ ಹೇಳ್ತಾ ಇರ್ತೀನಿ ಚಾಕ್‌ಲೇಟ್ ಕೊಟ್ಟು Walk man, walk man ಅಂತ! ಚಾಕ್‌ಲೇಟ್ ಆಸೆಗೆ ಆ ಮಕ್ಕಳೂ ಈಗ ನನ್ನ ಜೊತೆ ವಾಕಿಂಗ್ ಬರಲು ಪ್ರಾರಂಭಿಸಿವೆ!

ವಾಕಿಂಗ್ ದೇಹಕ್ಕೆ ವ್ಯಾಯಾಮ, ಮನಸ್ಸಿಗೆ ಸಂತೋಷ ಕೊಡಬೇಕಲ್ಲವೆ? Walking is the best medicine ಎನ್ನುವ ವಿಚಾರಗಳು ಪತ್ರಪುಸ್ತಕದ ವಿಷಯಗಳು. ಅದನ್ನು ಹೇಳೋದಕ್ಕೆ ಬೇಕಾದಷ್ಟು ಮಾಸ್ತರುಗಳು, ಡಾಕ್ಟರುಗಳು

ಇಷ್ಟೇ ಇದಾರೆ. ಆದರೆ ವಾಕಿಂಗ್ ಪ್ರಪಂಚದ ವಿನೋದಗಳನ್ನು ನೀವು ಸವಿಯಬೇಕಾದರೆ ನೀವು ಪ್ರತಿದಿನ ಕೆಲವು ನಿಮಿಷಗಳಾದರೂ ವಾಕ್ ಮಾಡಲೇಬೇಕು.

ನನಗೆ ಷುಗರ್ ಇದೆ ಅಂತ ವೈದ್ಯರು ರಕ್ತ ಪರೀಕ್ಷೆ ಮಾಡಿ ರಿಸಲ್ಟ್ ಹೇಳಿದ ಮೇಲೆ ನಾನು ವಾಕಿಂಗ್ ಹೋಗಲೇಬೇಕೆಂಬ ಆದೇಶ ಹೊರಬಿತ್ತು. ಮಾರ್ನಿಂಗ್ ನ್ಯೂಸಿಗೆ ಕಾಯದೆ ಮಾರ್ನಿಂಗ್‌ವಾಕ್ ಪ್ರಾರಂಭಿಸಲೇಬೇಕಾಯಿತು. ಮೊದಲನೆ ಡೋಸ್ ಕಾಫಿ 5 ಗಂಟೆಗೇ ಕೊಡುವ ಇನ್‌ಸೆಂಟೀವ್ ಒಡ್ಡಿದಳು ಮನೆಯಾಕೆ ಮೊಟ್ಟಮೊದಲಬಾರಿಗೆ. ಇದು ನನ್ನ ಗೃಹಗತಿಗೆ ಸಂಬಂಧಪಟ್ಟ ವಿಷಯವಾದುದರಿಂದ ನೀವು ಅದಕ್ಕೆ ಹೆಚ್ಚು ಮಹತ್ವ ಕೊಡಬೇಕಾಗಿಲ್ಲ! 'ಬೆಡ್‌ಕಾಫಿ' ಸಿಗುತ್ತಲ್ಲ ವಾಕಿಂಗ್ ಹೊರಟರೆ ಎನ್ನುವ ಸಂತಸ ಒಂದು ಕಡೆಯಾದರೆ ಆ ಹಾಳು ಕಾಫಿ ಷುಗರ್‌ಲೆಸ್ ಎನ್ನುವುದನ್ನು ನೆನೆಸಿಕೊಂಡರೆ ನಾಲಿಗೆ ಒಣಗೇ ಹೋಗುತ್ತೆ. ಸಾಮಾನ್ಯವಾಗಿ ಬೆಡ್‌ಕಾಫಿ ಅಗತ್ಯ ಕೆಲವು ರೋಗಿಷ್ಠರಿಗಿದೆ ಎಂಬ ವಿಚಾರವನ್ನು ಪ್ರಸ್ತಾಪಿಸಿದ್ದ ಒಂದು ಲೇಖನವನ್ನು "India - Today" ಮಾಸಿಕದಲ್ಲಿ ಓದಿದ್ದೆ. ರೋಗಿಷ್ಠ ಎಂಬ ಬೋರ್ಡ್ ಕುತ್ತಿಗೆಗೆ ಬಿತ್ತಲ್ಲ ಎಂಬ ಸಂಕಟ ಗಂಟಲಲ್ಲಿ ಒತ್ತಿಕೊಂಡು ಬಂದರೂ ಬೆಳಗಿನ ನಸು ಬೆಳಕಿನಲ್ಲಿ ನಮ್ಮ ಸರ್ವಿಸ್ ರಸ್ತೆ ತುಂಬ ವಾಕಿಂಗ್ ಹೋಗುವ ಪ್ರಾಣಿಗಳನ್ನು ಕಂಡಮೇಲೆ ಮನಸ್ಸಿಗೆ ಧೈರ್ಯ, ಸಮಾಧಾನ ಸಿಕ್ಕಿತು ಯಾಕೆಂದರೆ ಅವರೆಲ್ಲ ಕುತ್ತಿಗೆಗೆ ಬೋರ್ಡ್ ತಗಲಿಹಾಕಿಕೊಂಡವರೇ! ನಾನು ವಾಕಿಂಗ್ ಪ್ರಾರಂಭ ಮಾಡಿ ಇನ್ನೂ ಹತ್ತು ದಿನವೂ ಆಗಿರಲಿಲ್ಲ ಒಂದು ದಿನ ಬೆಳಿಗ್ಗೆ ಎದ್ದ ತಕ್ಷಣ ಮುಂಜಾನೆ ಛಳಿಯಲ್ಲಿ ನಡೆದುಕೊಂಡು ಬರುತ್ತಿದ್ದ ಒಂದು ಡಜನ್ ವಾಕಿಂಗ್‌ಸ್ಟಿಕ್‌ಗಳು ನನ್ನನ್ನು ಹಠಾತ್ತನೆ ನಿಲ್ಲಿಸಿ ಕೈಕುಲುಕಿ "Welcome to our new member' ಎನ್ನುವುದೆ? - ರಕ್ತ ಸಂಬಂಧಿಗಳಂತೆ - ಪ್ರೀತಿ ವಾತ್ಸಲ್ಯಗಳನ್ನು ಮೆರೆದು! ಅಷ್ಟೇ ಅಲ್ಲ. 200 ಇದ್ದರೂ ಗಾಬರಿ ಪಡಬೇಡಿ, "it is well under control' ಎಂದ ಅವರಲ್ಲೊಬ್ಬ ಖದೀಮ. ದಬಾಯಿಸಿದರೆ ಪ್ರಯೋಜನವಿಲ್ಲವೆಂದು 'ನಿಮಗೆ ಹೇಗೆ ಗೊತ್ತಾಯ್ತು?' ಎಂದೆ. ಕ್ಯಾಂಟಿನ್‌ನಲ್ಲಿ ನಿಮ್ಮನ್ನು ನೋಡಿದ ತಕ್ಷಣ ಸರ್ವರ್ 'ಒಂದು ಲೆಸ್' ಅಂತ ಕೂಗಿ ಕೊಂಡಾಗಲೇ ಗೊತ್ತಾಯ್ತು ಎಂದ ಆ ಬೊಕ್ಕ ತಲೆಯ ಪಟಿಂಗ!

ಹಾಳಾದವನು ಷರ್ಲಾಕ್ ಹೋಂಸ್ ವಂಶದವನಿರಬೇಕೆಂದು ಮನಸ್ಸನ್ನು ಗಟ್ಟಿ ಮಾಡಿಕೊಂಡು ಕಂಡವರ ರಕ್ತಕ್ಕೆ ಸೂಜಿ ಹಾಕೋ ಸ್ವಭಾವ ಇರಬೇಕು, ಸರಿಯಾಗಿ ಬೇಸ್ತುಬಿದ್ದ ಹಾಳಾದವನು ಅಂತ ಅಂದುಕೊಂಡೆ. ಅವನಿಗೇನು

ಗೊತ್ತು ನಾನು ಷುಗರ್‌ಲೆಸ್ ಕಾಫಿಗೆ ಆರ್ಡರ್ ಮಾಡೋದು ಎರಡು ಮೂರು ಜಾಮೂನ್ ನುಂಗಿ ಬೆಣ್ಣೆ ಮಸಾಲೆ ತಿಂದ ಮೇಲೆ ಅಂತ! ಮುಖ್ಯವಾಗಿ ನಾನು ವಾಕಿಂಗ್ ಪ್ರಾರಂಭಿಸಿದ ಮೇಲೆ ನನ್ನ ಕಣ್ಣು ಕಿವಿ ತುಂಬ ಚುರುಕಾಯ್ತು. ಹಲವಾರು 'ವಾಕಿ-ಟಾಕಿ' ಗಳು ಸ್ನೇಹಿತರಾದರು! ಬೀದಿಯುದ್ದಕ್ಕೂ ಮಾತು. ನಾನು ಗಣಿತ ಶಾಸ್ತ್ರದ ವಿದ್ಯಾರ್ಥಿಯಾಗಿದ್ದುದರಿಂದ ಅಂಕಿ ಅಂಶಗಳನ್ನು ಶೇಖರಿಸುವ ಪ್ರವೃತ್ತಿ ನನಗೆ ರಕ್ತಗತವಾಗಿದೆ. ನನ್ನ ವಾಕಿಂಗ್ ಸಹಚರರೊಡನೆ ಅಡ್ಡಾಡಿದಾಗ ಹಲವಾರು ರೋಗಗಳ ಚರ್ಯೆಗಳನ್ನೂ, ಇಂಗ್ಲಿಷ್ ಹಾಗೂ ದೇಶೀಯ ಔಷಧಿಗಳನ್ನೂ, ಆಯುರ್ವೇದ, ಹೋಮಿಯೋಪತಿಗಳು ಹೇಳುವ ರೋಗ ನಿವಾರಣೋಪಾಯಗಳನ್ನೂ, ಯುನಾನಿ ಔಷಧಿ ಕ್ರಮಗಳನ್ನೂ ತಿಳಿದುಕೊಳ್ಳುವ ಸುಯೋಗವು ನನಗೆ ಲಭಿಸಿದ್ದು ನನ್ನ ಪೂರ್ವಾರ್ಜಿತ ಪಾಪ ವಿಶೇಷ! ಕರಿ ಕೊರಂಗುಲೇಹ್ಯ ಒಣಶುಂಟಿ ಭಸ್ಮ, ಬಿಳಿ ಮೆಣಸು ಕಷಾಯ, ತುಳಸಿ ಸಿರಪ್, ಕರಿಬೇವಿನ ಷರಬತ್ತು, ಬಿಲ್ವಪತ್ರೆ ಭಸ್ಮ, ಅಶ್ವಗಂಧಿ ರಸಾಯನ, ಮಲಬದ್ಧತೆಗೆ 'ಸಾಫ್‌ಸೀದ' ನಾರಿಕೇಳ ಗುಟುಕ, ನಿತ್ಯಾನಂದ ಗುಳಿಗೆ, ಕನ್ನಡ ಕಸ್ತೂರಿ ಮಾತ್ರೆ, ಕ್ಲೇಷ ವರ್ಧನಿ ತೈಲ ಮುಂತಾದ ಔಷಧಿಗಳ ಪರಿಚಯ ಆಗಿ ಸೇವನೆಗೆ ತಿರುಗಿತು, ಸ್ನೇಹ ಪ್ರೇಮಕ್ಕೆ ತಿರುಗುವ ಹಾಗೆ!

ಬೆಳಿಗ್ಗೆ ಒಂದು ದಿನವೂ ತಪ್ಪದೇ ಚಳಿಯಲ್ಲಿ ವಾಕಿಂಗ್ ಹೋಗುವ ನೂರಾರು ಜನರ ಮಾನಸಿಕ ಒತ್ತಡಗಳನ್ನೂ, ಚಿತ್ರ ವಿಚಿತ್ರ ಭೌತಿಕ ಚರ್ಯೆಗಳನ್ನೂ, ಮನೋವಿಕಾರಗಳನ್ನೂ ಅವರ ಶಬ್ದ ಪ್ರಯೋಗಗಳನ್ನೂ ಗಮನವಿಟ್ಟು ನೋಡಿ ಕೇಳಿದಾಗಲೇ ನನಗೆ ವಾಕಿಂಗ್ ಪ್ರಪಂಚದ ನಗೆ-ಹೊಗೆ ಗೊತ್ತಾಗಿತ್ತು. ಫಾರಿನ್‌ನಲ್ಲಿರೋ ಮಗ ನಿಗ್ರೋ ಹುಡಿಗಿಯನ್ನು ಪ್ರೀತಿಸಿ ಮದುವೆ ಮಾಡಿಕೊಂಡಿದ್ದು, ಕ್ಯಾಲಿಫೋರ್ನಿಯಾಕ್ಕೆ ಹೋದ ಮಗಳು ಪ್ರೀತಿಯಿಂದ ಅಪ್ಪಂಗೆ ಸಾವಿರ ಡಾಲರ್ ಕಳಿಸಿಕೊಟ್ಟಿದ್ದು, ಕಂಪ್ಯೂಟರ್ ಇಂಜಿನಿಯರ್ ಅಳಿಯ ವಾಹನ ಅಪಘಾತಕ್ಕೆ ಸಿಕ್ಕಿ, ಅಸುನೀಗಿದ್ದು, ರಾಣಿ ಬೆನ್ನೂರು ಅತ್ತೆ ಬೆಂಗಳೂರು ಸೊಸೆಗೆ ಕಿರುಕುಳ ಕೊಟ್ಟಿದ್ದು, ಸೊಸೆ ಅತ್ತೆ ಕಾಲು ಮುರಿದಿದ್ದು, ಲಂಚ ಕೊಟ್ಟು ಪ್ರಾಣ ಕಳಕೊಂಡ ಸೀರಿಯಲ್ ಕಥೆ, ಹಾಲಿನಲ್ಲಿ ವಿಷ ಹಾಕಿ ಗರ್ಭಿಣಿ ಸ್ತ್ರೀಗೆ ಕುಡಿಯಲು ಕೊಡುವ ಟಿ.ವಿ. ಸಿನಿಮ ದುರಂತ - ಇವೇ ಮುಂತಾದ ವೈವಿಧ್ಯಮಯ ಬದುಕಿನ ಅನುಭವಗಳು, ಸಾಂಸಾರಿಕ ಸರಸ ಸಂಘರ್ಷಗಳು ಇಲ್ಲಿ ದಾರಿಯುದ್ದಕ್ಕೂ ನಡೆಯುವ ಸಂಭಾಷಣೆಗಳ ತಿರುಳು. ಒಬ್ಬರಿಗೊಬ್ಬರು ತಮ್ಮ ತಮ್ಮ ಕೌಟುಂಬಿಕ ಕಷ್ಟ ನಷ್ಟಗಳನ್ನು ಹೇಳಿಕೊಂಡು ಮನಸ್ಸಿನ ಟೆನ್ಷನ್ ಕಡಿಮೆ ಮಾಡಿಕೊಳ್ಳುವುದು ಇಲ್ಲಿಯ ವಿಸ್ಮಯ. Healing effect!

ನಮ್ಮ ನಗರದ ಪ್ರೆಮ್ ವಾಕಿಂಗ್ ಲೇನ್‌ಗಳಲ್ಲಿ ಅವರವರ ವಯೋಧರ್ಮಕ್ಕೆ ಹಾಗೂ ವಿಭಿನ್ನ ರೋಗಗಳ ಅಗತ್ಯಕ್ಕನುಗುಣವಾಗಿ ಕಾಲಿಗೆ ಕ್ಯಾನ್‌ವಾಸ್ ಷೂ, ತಲೆಗೆ ಟೋಪಿ ಅಥವಾ ಮಫ್ಲರ್, ತುಂಬು ತೋಳಿನ ಸ್ವೆಟರ್, ಕಾಶ್ಮೀರದ ಶಾಲು ಬಣ್ಣ ಬಣ್ಣದ ಪೋಷಾಕುಗಳನ್ನು ಧರಿಸಿ ಸಾಮಾನ್ಯ ಜನರು ಸೂರ್ಯೋದಯಕ್ಕೆ ಮುಂಚೆ ನಡೆದು ಹೋಗುವ ದೃಶ್ಯಾವಳಿ ತುಂಬ ಚೇತೋಹಾರಿ, 'ವಾಕಿಂಗ್' ಹೆಚ್ಚಾಗಿ ನಗರಗಳಲ್ಲಿ ಬೆಳೆದು ಬಂದಿರುವ ಒಂದು ದೈನಂದಿನ ಸಾಂಸ್ಕೃತಿಕ ಕಾರ್ಯಕ್ರಮ.

ನಮ್ಮ ದೇಶದಲ್ಲಿ ಆರೋಗ್ಯವಂತರು ವಾಕಿಂಗ್ ಹೋಗೋದೇ ಇಲ್ಲ. ಅಂದ ಹಾಗೆ ಆರೋಗ್ಯವಂತರಿಗೆ ವಾಕಿಂಗ್ ಯಾಕೆ? ಡಯಾಬಿಟಿಕ್‌ಗಳಿಗೆ, ಬಿ.ಪಿ. ಗಳಿಗೆ, ಅಲರ್ಜಿ, ಆಸ್ಥ್ಮಾಟಿಕ್, ಸೈಕಿಕ್, ಗ್ಯಾಸ್ಟ್ರಿಕ್‌ಗಳಿಗೆ ವಾಕಿಂಗ್ ಬೇಕೇಬೇಕು. ವಾಕಿಂಗ್ ಹೋಗುವ ಯಾರನ್ನಾದರೂ ಕೇಳಿ, ವಾಕಿಂಗ್ ಯಾಕೆ ಹೋಗುತ್ತಿದ್ದೀರ ಅಂತ. ನೂರಕ್ಕೆ ನೂರು ಜನ ಯಾವುದಾದರೂ ಖಾಯಿಲೆ ಕಾರಣ ಹೇಳುತ್ತಾರೆ. 'ಆರೋಗ್ಯವಾಗಿದ್ದಷ್ಟು ದಿನ ನಾವು ವಾಕಿಂಗ್ ಹೋಗಲೇ ಇಲ್ಲ' ಎನ್ನುತ್ತಾರೆ. ಆರೋಗ್ಯರಕ್ಷಣೆಗಿಂತ ರೋಗ ಗುಣಪಡಿಸಿಕೊಳ್ಳಲು ಈಗ ವಾಕಿಂಗ್‌ನ್ನು ನಾವು ಔಷಧಿಯಾಗಿ ಉಪಯೋಗಿಸುತ್ತೇವೆ. ತೂಕ ಹೆಚ್ಚಿಸಿಕೊಳ್ಳೋದಕ್ಕೂ ವಾಕಿಂಗ್, ತೂಕ ಇಳಿಸಿಕೊಳ್ಳೋದಕ್ಕೂ ಬೇಕು ವಾಕಿಂಗ್. ಎರಡೂ ರೋಗದ ಬಾಧೆಗಳೇ ಎಂದೆನಿಸುತ್ತದೆ!

ಒಂದು ನಗರದ ಒಂದು ಬಡಾವಣೆಯ ಜನಗಳ ಆರೋಗ್ಯದ ಮಟ್ಟವನ್ನು ಅಳೆಯಬೇಕಾದರೆ ಅಲ್ಲಿಯ ಜನಸಂಖ್ಯೆಯಲ್ಲಿ ಶೇಕಡವಾರು ಎಷ್ಟು ಜನ ವಾಕಿಂಗ್ ಹೋಗುತ್ತಾರೆ ಎಂಬುದರ ಬಗ್ಗೆ ಅಂಕಿ ಅಂಶಗಳನ್ನು ಸಂಗ್ರಹಿಸಿ ವಿಶ್ಲೇಷಿಸಬಹುದು. Health care ಸಂಸ್ಥೆಗಳು ಈಗಾಗಲೇ exit ಪೋಲ್‌ಗಳಂತೆ ಸಮೀಕ್ಷೆಗಳನ್ನು ನಡೆಸಿವೆ. ಹತ್ತು ಜನರಲ್ಲಿ 8 ಜನಕ್ಕೆ ಡಯಾಬಿಟಿಕ್ ಅಂತೆ, ನೂರಕ್ಕೆ 80 ಬಿ.ಪಿ., ಹೈಪರ್ ಟೆನ್ಷನ್ - ಭೂಮಂಡಲದ ತುಂಬ ನರಮಂಡಲದ ಖಾಯಿಲೆ. ಮಾನಸಿಕ ಒತ್ತಡ ಎಲ್ಲೆಲ್ಲೂ ಇದನ್ನೆಲ್ಲ ಕೇಳಿ ಫ್ಯಾಕ್ಟರಿ ಮಾಲೀಕರೊಬ್ಬರು ನಮ್ಮದು "Sick nation' ಎಂದರು! ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಇದನ್ನೆಲ್ಲ ಜನನಾಯಕರು ಸರಿಪಡಿಸೋದು ಹೇಗೆ? ತುಂಬಾ ದುಬಾರಿಯ ವೈದ್ಯಕೀಯ ಸೌಲಭ್ಯಗಳನ್ನು ಬಡಜನರಿಗೆ ದೊರಕಿಸಲು ಹೈಟೆಕ್ ಆಸ್ಪತ್ರೆಗಳನ್ನು ಸ್ಥಾಪಿಸುವುದಕ್ಕೆ ಸರ್ಕಾರದ ಹಣಕಾಸಿನ ಪರಿಸ್ಥಿತಿ ಅಡ್ಡ ಬರುತ್ತದೆ. ಆದುದರಿಂದ ಅತ್ಯಂತ ಸರಳವೂ ಸುಲಭವೂ ಆದ ವಾಕಿಂಗ್ ಸೂತ್ರಗಳನ್ನು ಜನ ಸಮುದಾಯಕ್ಕೆ ಕಲಿಸಿ ವಾಕಿಂಗ್ ವ್ಯಾಯಾಮಕ್ಕೆ ಹೆಚ್ಚು ಉತ್ತೇಜನ ಮತ್ತು

ಪ್ರೋತ್ಸಾಹಗಳನ್ನು ಕೊಡುವುದರ ಮೂಲಕ ಜನಗಳ ಆರೋಗ್ಯ ರಕ್ಷಣೆಯನ್ನು ಕಡಿಮೆ ಖರ್ಚಿನಲ್ಲಿ ನಿರ್ವಹಿಸಲು ಸಾಧ್ಯ! ಸರ್ಕಾರ ಈಗಾಗಲೇ ಆಹಾರದ ಸಮಸ್ಯೆಯನ್ನು ಗಂಭೀರವಾಗಿ ಬಗೆಹರಿಸಿದೆ. ಆದಷ್ಟು ಕಮ್ಮಿ ಕ್ಯಾಲರಿಗಳಲ್ಲಿ ಬದುಕುವ ಜನ ನಮ್ಮ ದೇಶಕ್ಕೆ ಬೇಕು. "Fasting does not kill' ಎಂಬ ಸೂತ್ರವನ್ನು ಪ್ರಚಾರ ಮಾಡಿ ಅಪಾರ ಜನಸ್ತೋಮವನ್ನು ಉಳಿಸಿಕೊಳ್ಳುವುದೇ ಉತ್ತಮ ರಾಜ ಕಾರಣದ ಪರಮ ಗುರಿ. "Few people die of hunger, but thousands by over eating' ಎಂಬ ಜಾಣ ನುಡಿಯನ್ನು ಜ್ಞಾಪಿಸಿಕೊಂಡರೆ ಸರ್ಕಾರದ ಪಬ್ಲಿಕ್ ಹೆಲ್ತ್ ಯೋಜನೆಗಳ ಅರ್ಥ ತಿಳಿಯುತ್ತದೆ. ಆಹಾರದ ನಿಯಂತ್ರಣದಿಂದ ಪ್ರಜಾ ಪ್ರಭುತ್ವವನ್ನು ಉಳಿಸಲು ಸಾಧ್ಯ! ಅಯ್ಯೋ! ಎಲ್ಲಿಂದಲೋ ಪ್ರಾರಂಭಿಸಿ ಎಲ್ಲಿಗೋ ಹೊರಟು ಹೋದೆ. ಹಾಳು ಮಾನಸಿಕ ಒತ್ತಡ. ಆದ್ದರಿಂದ ಮಾನಸಿಕ ಆರೋಗ್ಯವನ್ನು ನೋಡಿಕೊಳ್ಳಲು walking must ಎನ್ನುತ್ತಾರೆ ವೈದ್ಯರು.

ಮೊನ್ನೆ ನಾನು ವಾಕಿಂಗ್ ಹೋಗುವ ಹೊತ್ತಿಗೆ ಬೆಳಕು ಹರಿದಿರಲಿಲ್ಲ. ಇಬ್ಬರು ದಢೂತಿ ಆಸಾಮಿಗಳು ಬೊಜ್ಜು ಕರಗಿಸುವುದಕ್ಕೆ ಬಿರಿಸಿನ ಹೆಜ್ಜೆಗಳನ್ನು ಹಾಕುತ್ತ ನಡೆದು ಬರುತ್ತಿದ್ದರು. ಅವರು ಏನು ಮಾಡಿದರು ಗೊತ್ತೆ? ಇನ್ನೇನು ನನ್ನ ಸಮೀಪಕ್ಕೆ ಬಂದರು ಎನ್ನುತ್ತಿದ್ದ ಹಾಗೆ ತಮ್ಮ ಎರಡು ಕೈಗಳನ್ನೂ ಮೇಲಕ್ಕೆತ್ತಿ ಹಠಾತ್ತನೆ ನಿಂತುಬಿಟ್ಟರು. ನಾನೇನೂ ಬಂದೂಕವನ್ನು ತೋರಿಸಿ "Hands up' ಅಂತ ಅವರ ಮುಂದೆ ಕೂಗು ಹಾಕಿರಲಿಲ್ಲ. ರಂಗಸಾಮಿ ಪಕ್ಕದಲ್ಲೇ ಇದ್ದ. ವೈದ್ಯರ ಸಲಹೆ ಪಾಲಿಸಲು ಕೆಲವು ರೋಗಿಗಳು ಹೀಗೆಲ್ಲ ಮಾಡ್ತಾರೆ - ಬ್ಲಡ್ ಸರ್ಕ್ಯುಲೇಷನ್ ಸರಿಪಡಿಸಿಕೊಳ್ಳೋಕೆ, ನೀನೇನು ಗಾಬರಿ ಪಡಬೇಕಾಗಿಲ್ಲ ಅಲ್ಲಿ ನೋಡು ಆ ಮಹರಾಯ ಜಾಗಿಂಗ್ ಮಾಡ್ತ ಪಕ್ಕದಲ್ಲಿರೋ ಸಾಲುಮರದ ಕೊಂಬೆಗೆ ತೂಗು ಹಾಕಿಕೊಂಡು ಕಾಲುಗಳಿಂದ ಹಿಂದಕ್ಕೂ ಮುಂದಕ್ಕೂ ಜಾಡಿಸುತ್ತಿದಾನೆ ಆ ಸೈಂಧವನನ್ನು ನೋಡು, ಎರಡು ಕೈಗಳನ್ನೂ ಒಂದಾದ ಮೇಲೆ ಇನ್ನೊಂದನ್ನು ಭರ್ಜಿಯಿಂದ ತಿವಿಯುವ ಹಾಗೆ ಗಾಳಿಗೆ ಒಂದೇ ದಿಕ್ಕಿನಲ್ಲಿ ತಿವಿಯುತ್ತಿದ್ದಾನೆ. ಅಲ್ಲಿ ನೋಡು ಆ ನಡು ವಯಸ್ಸಿನ ಯುವಕ ಪಾರ್ಕಿನ ಹುಲ್ಲಿನ ಮೇಲೆ ಬಿದ್ದುಕೊಂಡು ಉರುಳಾಡ್ತಿದಾನೆ - ಇವೆಲ್ಲ ನೋಡೋಕೆ ಎಷ್ಟು ಚೆಂದ ಎಂದು ಹೇಳಿ ನನಗೆ ರೋಗದ ವೇದನೆಯನ್ನು ಕಡಿಮೆ ಮಾಡಿದ. ರಕ್ತ ಪರಿಚಲನೆಯನ್ನು ಸುಸೂತ್ರಗೊಳಿಸುವುದಕ್ಕೆ, ಲಿವರ್ ಮೇದೋಜೀರಕ ಗ್ರಂಥಿಗಳನ್ನು active ಮಾಡೋಕೆ ಅಂಗಾಂಗಗಳನ್ನು ಹೀಗೆ ತಿರಿವಿ ತಿರಿವಿ ಹದಕ್ಕೆ ತರುತ್ತಾರೆ ಇದೆಲ್ಲ 'ಫಿಸಿಯೋ ವಾಕಿಂಗ್ ಥರ್ಪಿ' ಎಂದ! ವಾಕಿಂಗ್ ಸ್ಟಿಕ್

ಊರುತ್ತ ಸಮ ಹೆಜ್ಜೆಗಳಲ್ಲಿ ನಡೆದುಹೋಗುವ ವಯೋವೃದ್ಧರ ವಾಕಿಂಗ್, ಮಹಿಳಾ ಮಣಿಗಳ ಮೆಲು ನಡಿಗೆಯ ವಾಕಿಂಗ್, ಫ್ಯಾಷನ್ ಹೆಂಗಳೆಯರ ಜೆಕ್ಕಿನ ಹೆಜ್ಜೆ ವಾಕಿಂಗ್ ನೋಡೋಕೆ ಮನಮೋಹಕ! ಮಂಡೂಕಾಸನ, ಕುಕ್ಕಟಾಸನ ಶವಾಸನ ಮುಂತಾದ ಭಂಗಿಗಳಲ್ಲಿ ಮೆರೆಯುವ ಯೋಗಾಭ್ಯಾಸಿಗಳನ್ನು ದಾರಿಯುದ್ದಕ್ಕೂ ವಾಕಿಂಗ್ ಪ್ರಿಯರು ಸ್ವಾಗತಿಸುತ್ತಾರೆ. ಈಗೀಗ ನಮ್ಮ ರಸ್ತೆಗಳಲ್ಲಿ ಹೆಚ್ಚು ಜನ ನಾರೀ ಮಣಿಗಳು ವಾಕಿಂಗ್ ಬರಲು ಪ್ರಾರಂಭಿಸಿದ್ದಾರೆ. ಅಂದಮೇಲೆ ಮಂಡಿನೋವು, ಕಾಲುನೋವು, ಬೆನ್ನುನೋವು, ಕುತ್ತಿಗೆನೋವು ಒಂದಲ್ಲ ಒಂದು ನೋವು ಅವರನ್ನು ಕಾಡುತ್ತಿರಬೇಕು. ಮನೆಯಲ್ಲಿ ಕೂತು ಮುಲಾಮು ಹಚ್ಚಿ ಏನೂ ಪ್ರಯೋಜನ ಕಾಣದವರಾಗಿ ಈಗ ದೇಹವನ್ನು ಸ್ವಲ್ಪ ಮೂವ್ ಮಾಡುತ್ತಿದ್ದಾರೆ ಎಂದೆನಿಸುತ್ತದೆ. ಇದು ವಾಕಿಂಗ್‌ಗೆ ಸಿಕ್ಕಿದ ಮಾರ್ಯಾದೆ. ಅವರಿಗೆ ಲಾಭವಾದರೂ ನನ್ನಂಥವರಿಗೆ ನಷ್ಟ ಯಾಕೆಂದರೆ ನಾವು ಈಗ ಬೆಳಗಿನ ತಿಂಡಿಗೆ ದರ್ಶನಿಗಳನ್ನೇ ಆಶ್ರಯಿಸಬೇಕು. ಹೋಟಲ್ ತಿಂಡಿಗಳಿಂದ ಆರೋಗ್ಯ ಹಾಳಾದರೂ ವಾಕಿಂಗ್ ಇಂದ ಸರಿಪಡಿಸಿಕೊಂಡು ಸಮತೋಲನ ಕಾಪಾಡಿಕೊಳ್ಳಬಹುದಲ್ಲ! ಕಾರಿನಲ್ಲಿ ಕೂತು ಕೆಲವರು ವಾಕಿಂಗ್ ಹೋಗುತ್ತಾರೆ. ಲಾಲ್‌ಬಾಗ್ ಕಡೆ ವಾಕಿಂಗ್ ಹೋಗುವವರ ಬಗ್ಗೆ ನನಗೆ ಒಂದು ರೀತಿಯ ಅಸೂಯೆ. ಅಲ್ಲಿ ವಾಕಿಂಗ್ ಮುಗಿಸಿ ಕಾರಿನಿಂದಿಳಿದು ಎಲ್ಲಿಗೆ ಹೋಗುತ್ತಾರೆ ಅವರೆಲ್ಲ ಅಂತ ಒಮ್ಮೆ ಪರೀಕ್ಷಿಸಿದೆ. ಅವರು ಲಾಲ್‌ಬಾಗ್ ದಾರಿಯಲ್ಲಿ ಎಷ್ಟು ಕ್ಯಾಲರಿಗಳನ್ನು ಭಸ್ಮ ಮಾಡಿದ್ದರೋ ಅದರೆರಡರಷ್ಟು ಕ್ಯಾಲರಿಗಳನ್ನು ಹೋಟಲಿನಲ್ಲಿ ರಕ್ತಕ್ಕೆ ಸೇರಿಸಿ ನಾಲ್ಕೈದು ಸಿಗರೇಟುಗಳನ್ನು ಸುಟ್ಟು ಡಾಕ್ಟರ್ ಬಳಿ ಓಡಿದರು ಟೆಸ್ಟುಗಳಿಗೆ.

ನಮ್ಮೂರು 'ವಾಕಿಂಗ್‌ವೇ'ಗಳು ಅಧೋಗತಿಗಿಳಿಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ? ಎಂದು ಒಬ್ಬ ಎಂ.ಎಲ್.ಎ. ಆಗಲಿ ಎಂ.ಪಿ. ಆಗಲೀ ಶಾಸನ ಸಭೆಗಳಲ್ಲಿ ಪ್ರಶ್ನೆ ಹಾಕಿ ಉತ್ತರ ಪಡೆದಿಲ್ಲ. ಬೆಳಿಗ್ಗೆ 5 ಗಂಟೆ ಹೊತ್ತಿಗೇ ವಾಹನಗಳ ರಭಸದ ಓಡಾಟ ಪ್ರಾರಂಭವಾಗಿ ಪರಿಸರ ಕಪ್ಪು ಹೊಗೆಯಿಂದ ತುಂಬಿರುತ್ತೆ. ಇಂಥ ರಸ್ತೆಗಳಲ್ಲಿ ವಾಕಿಂಗ್ ಹೋಗುವುದಕ್ಕಿಂತ ತೆಪ್ಪಗೆ ಮನೆಯೊಳಗಿದ್ದರೆ ಆಸ್ತ್ಮ, ಬ್ರಾಂಕೈಟಿಸ್ ರೋಗಗಳಿಂದ ಹೇಗೋ ಪಾರಾಗಬಹುದು. ಈಗಂತೂ ಈ ರಸ್ತೆಗಳಲ್ಲಿ ವಾಕಿಂಗ್ ಹೋಗುವವರು ಹಳ್ಳ ದಿಣ್ಣೆಗಳಮೇಲೆ ಬಿದ್ದು ಕೈಕಾಲು ಮುರಿದುಕೊಂಡು ಆಸ್ಪತ್ರೆಗೆ ದಾಖಲಾಗುವವರ ಸಂಖ್ಯೆಯೂ ಹೆಚ್ಚಾಗುತ್ತಿದೆ. ವಾಕಿಂಗ್ ಒಂದು ದಿವ್ಯ ಔಷಧ ಎಂದು ತಿಳಿದುಕೊಂಡಿರುವವರು ಶುದ್ಧ ಮೂರ್ಖರು ಎಂದು ಮೊನ್ನೆ ನಡೆದ ನಗರದ ವೈದ್ಯ ಸಮ್ಮೇಳನದಲ್ಲಿ ಪ್ರತಿಭಟನೆಯನ್ನು ಸಭಿಕರು ವ್ಯಕ್ತಪಡಿಸಿದರು. ಈ

ಕಾರಣದಿಂದಲೋ ಏನೋ ನನ್ನ ಮಿತ್ರರೊಬ್ಬರು ದೊಡ್ಡಾಸ್ಪತ್ರೆ ರಸ್ತೆಯಲ್ಲಿ ಮಾತ್ರ ವಾಕಿಂಗ್ ಹೋಗುತ್ತಾರೆ, ಜೇಬಿನಲ್ಲಿ ಅಡ್ರೆಸ್ ಬರೆದ ಕಾರ್ಡನ್ನು ಜೋಪಾನವಾಗಿಟ್ಟುಕೊಂಡು! ಏನೇ ಆಗಲೀ ಪ್ರಜೆಗಳ ಯೋಗಕ್ಷೇಮವನ್ನು ನೋಡಿಕೊಳ್ಳಬೇಕಾದ ಸರ್ಕಾರ ನಗರದ ರಸ್ತೆಗಳನ್ನು One way ಮಾಡಲು ಹೊಂದಿರುವುದು ಭಯಾನಕವಾಗಿದೆ!

ನಮ್ಮ ಬಡಾವಣೆಯಲ್ಲಿರುವ ಕೆಲವೇ ರಸ್ತೆಗಳು ಬೆಳಗಿನ ಗಾಳಿ ಸೇವನೆಗೆ ಅಂದರೆ ವಾಕಿಂಗ್ ವಿಹಾರಕ್ಕೆ ಮೀಸಲಾಗಿದೆ ಎಂದು ನಾನು ಮೊದಲೇ ತಿಳಿಸಿದ್ದೇನೆ. ಅವುಗಳನ್ನು ನಿರ್ದಿಷ್ಟವಾಗಿ ಗುರ್ತಿಸಲು ನಾಗರೀಕರೇ ಆ ರಸ್ತೆಗಳಿಗೆ ಕೆಲವು ಹೆಸರುಗಳನ್ನಿಟ್ಟಿದ್ದಾರೆ. ಡಯಾಬಿಟಿಕ್ ಲೇನ್, ಬಿ.ಪಿ. ರೋಡ್, ಆಸ್ಥ್ಮ ಕಾರ್ನರ್, ಗಾಲ್ (ಬ್ಲಾಡರ್) ಫೀಲ್ಡ್, ಡಬ್ಬಲ್ ಬೈಪಾಸ್, ವಾಕ್ ಹಾರ್ಟ್ ಹೈವೇ, ಕಾರ್ಡಿಯೋಪಾರ್ಕ್, ರೂಮೆಟಿಕ್ ಫಾಲ್ಸ್ - ಇತ್ಯಾದಿ ಆ ಹೆಸರುಗಳು.

ನಮ್ಮ ವಾಕಿಂಗ್ ರಸ್ತೆಗಳಲ್ಲಿ ಕೊಲೆ, ಕಳ್ಳತನ ಮುಂತಾದ ಹೀನ ಕೃತ್ಯಗಳು ಯಾವುದೂ ನಡೆಯುತ್ತಿಲ್ಲ ಎಂದರೆ ಆಶ್ಚರ್ಯವಾಗಹುದು! ಯಜಮಾನರನ್ನು ಕಡ್ಡಾಯವಾಗಿ ವಾಕಿಂಗ್‌ಗೆ ಎಳೆದು ತರುವ ಕೆಲವು ಕಂತ್ರಿ ನಾಯಿಗಳು ರಸ್ತೆಗಳಿಗೆ ಸೆಕ್ಯೂರಿಟಿ ವ್ಯವಸ್ಥೆಯನ್ನು ತಂದು ಕೊಟ್ಟಿದೆ. ಆಗಾಗ್ಗೆ ಸರಪಳಿಗಳನ್ನು ಎಳೆದಾಡುತ್ತ ನೆಲವನ್ನು ಮೂಸಿ ನೋಡುವ ಈ ಶ್ವಾನಗಳು ಘುರ್, ಘುರ್ ಎಂದು ತನ್ನ ಸ್ವಭಾವವನ್ನು ತೋರಿಸುವುದರಿಂದ ಪೋಲೀಸನವರಿಗೂ, ಕಳ್ಳಕಾರರರಿಗೂ ಏನೂ ಲಾಭವಾಗುತ್ತಿಲ್ಲ. ಅಲ್ಲದೆ ವಾಕಿಂಗ್‌ಗೆ ಬರುವ ನಾರೀ ಮಣಿಗಳು ಚಿನ್ನದ ಸರಗಳನ್ನು ಮನೆಯಲ್ಲೇ ತೆಗೆದಿಟ್ಟು ಬರುತ್ತಾರೆ - ನಿರಾಭರಣ ಸುಂದರಿಗಳಂತೆ! ಈ ಕಾರಣದಿಂದ ಸರಗಳ್ಳರು ಈಗ ವಾಕಿಂಗ್‌ಗೆ ಬರುತ್ತಿಲ್ಲ.

ಮೊನ್ನೆ ಏನಾಯಿತು ಕೇಳಿ. ನಾಲ್ಕು ಜನ ಮಧ್ಯ ವಯಸ್ಸಿನವರು ಮೇಲಿಂದ ಮೇಲೆ ಚಪ್ಪಾಳೆ ತಟ್ಟುತ್ತ ನಡೆದು ಬರುತ್ತಿದ್ದರು. ಈ ಕೆಲಸವನ್ನು ವಿಧಾನಸೌಧದ ಮುಂದೆ ಮಾಡಬಾರದೆ ಇವರು ಎಂದೆನಿಸಿತು ನನಗೆ! ಚಪ್ಪಾಳೆ ಏಕೆ? ಎಂದು ವಿಚಾರಿಸಿದೆ. ದಿನಕ್ಕೆ 60 ಬಾರಿ ತಟ್ಟಿದರೆ ಡಯಾಬಿಟಿಸ್ ಮಾಯವಾಗುತ್ತೆ, ತಟ್ಟಿದವರಿಗೆ Heart failure ಆಗೊಲ್ಲ ಎಂದು ಅವರು ವಿವರಣೆ ಕೊಟ್ಟರು. ನನಗೆ ಖುಷಿಯಾಯ್ತು. ಈ ಚಪ್ಪಾಳೆ ಚಿಕಿತ್ಸೆಯನ್ನು ನಾನ್ಯಾಕೆ ಪ್ರಾರಂಭಿಸಬಾರದು ಅಂತ ಒಂದು ದಿನ ವಾಕಿಂಗ್ ಮಧ್ಯೆ ಒಂದೆರಡು ಸಲ ಚಪ್ಪಾಳೆ ಹಾಕಿದೆ! ಮುಂಭಾಗದಲ್ಲಿ ಓರ್ವ ಯುವತಿ ಗೆಜ್ಜೆ ಹೆಜ್ಜೆಗಳನ್ನು ಹಾಕುತ್ತ ವಾಕಿಂಗ್ ಹೋಗುತ್ತಿದ್ದಳು. ನನ್ನ ಚಪ್ಪಾಳೆ ಸದ್ದು ತಾಳ ಹಾಕಿದಂತಾಯಿತು! ಆಕೆ

ಹಿಂತಿರುಗಿಕೊಂಡು ಕಂಗಣ್ಣುಬಿಡುತ್ತ 'ನಾಚಿಕೆಯಾಗೊಲ್ವೆ ನಿಮಗೆ, ಹಿಂಬದಿಯಿಂದ ಚಪ್ಪಾಳೆ ತಟ್ಟಿ ಪರಸ್ತ್ರೀನ ಕರಿತೀರಲ್ಲ, ಥೂ' ಎಂದಳು. ನನ್ನ ದೇಹದಲ್ಲಿ Low sugar ಚಿಹ್ನೆಗಳು ಕಾಣಿಸಿಕೊಂಡವು! ಕೈಕಾಲುಗಳಲ್ಲಿ ನಡುಕ, ಹಣೆ ಮೇಲೆ ಬೆವರು! ''ತಾಯಿ, ನಾನು ನಿಮ್ಮನ್ನು ದೇವರಾಣೆ ಕರೀಲಿಲ್ಲ. ಡಯಾಬಿಟಿಸ್ ರೋಗವನ್ನು ಓಡಿಸಲು ನಾನು ಹಾಕಿದ ಚಪ್ಪಾಳೆ ಇದು'' ಎಂದು ಹೇಳುತ್ತ ಜೇಬಿನಲ್ಲಿಟ್ಟುಕೊಂಡಿದ್ದ ಬಾದಾಮ್ ಬರ್ಫಿ ಪೀಸನ್ನು ಕೊಟ್ಟು ಇದೊಂದು 'ಥೆರಪಿ' ಎಂದೆ. ನಿಮ್ಮ ಮನೆ ಬಾಲ್ಕನಿಯಲ್ಲಿ ನಿಂತು ತಾಳಿಪಿಟ್ಟು ತಟ್ಟುವಂತೆ ತಟ್ಟಿ ಚಪ್ಪಾಳೆ ಎಂದಳು ತಾಲಿಬಾನ್ ಮಾದರಿಯಲ್ಲಿ! ನನ್ನ ಪುಣ್ಯ, ಶಕ್ತಿ ದೇವತೆ ನನ್ನ ಅಪಾಲಜಿಯನ್ನು ಸ್ವೀಕರಿಸಿದಳು!

ನಮ್ಮ ಪಾರ್ಕ್ ಬೀದಿಯಲ್ಲಿ ವಾಕಿಂಗ್ ಬರುವವರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ. ವಲಸೆ ಹೋಗುವವರಂತೆ ತಂಡತಂಡವಾಗಿ ನಡೆದು ಹೋಗುತ್ತಾರೆ. ಕೆಲವು ದಿವಸಗಳ ಹಿಂದೆ ನಿವೃತ್ತ ನ್ಯಾಯಾಧೀಶರೊಬ್ಬರು ಹಠಾತ್ತನೆ ಡಯಾಬಿಟಿಕ್ ಲೇನಿನಲ್ಲಿ ಕಾಣಿಸಿಕೊಂಡರು. ಅವರು ಬಂದಿದ್ದು ಹಾಗಲಕಾಯಿ ಕಷಾಯ ಕುಡಿಯೋಕೆ, ಎಂದು ತಿಳಿದು ಆಶ್ಚರ್ಯವಾಯಿತು. ಆ ಸಬ್‌ವೇಲಿ ಒಬ್ಬ ಆಯುರ್ವೇದ ಪಂಡಿತರೊಬ್ಬರು ಒಂದು ಕಷಾಯದ ದವಾಖಾನೆ ತೆರೆದಿದ್ದಾರೆ. ಅದು ಒಂದು ಆಯುರ್ವೇದಿಕ್ ಕೆಫೆಟೇರಿಯ. ಟೇಬಲ್ ಮೇಲೆ ನಾಲ್ಕೈದು ಸ್ಟೀಲ್ ಪಾತ್ರೆಗಳಲ್ಲಿ ಹರ್ಬಲ್ ಕಷಾಯಗಳನ್ನು ತುಂಬಿ ಇಟ್ಟಿದ್ದಾರೆ. ಪಕ್ಕದಲ್ಲೇ ಪ್ಲಾಸ್ಟಿಕ್ ಕಪ್ಪುಗಳು, ಗ್ಲಾಸುಗಳು, ಬೆಳಿಗ್ಗೆ 6 ರಿಂದ 8ರ ವರೆಗೆ ಸೊಗಸಾದ ಬಿಸಿನೆಸ್. ಸಕ್ಕರೆ ಖಾಯಿಲೆಯವರಿಗೆ ಹಾಗಲಕಾಯಿ, ಬೇವಿನ ಸೊಪ್ಪು ತುಳಸಿ ರಸಗಳ ಮಿಶ್ರಣದ ಕಷಾಯ. ದೃಷ್ಟಿ ಮಾಂದ್ಯದವರಿಗೆ ಕ್ಯಾರೆಟ್ ಜ್ಯೂಸ್, ಅಸ್ತ್ರ ರೋಗದವರಿಗೆ ದಾಳಂಬ್ರಿ ಸೊಪ್ಪಿನ ರಸ - ಹೀಗೆ ಎಲ್ಲಾ ವಿಧವಾದ ಕಾಯಿಲೆಗಳಿಗೂ ಹರ್ಬಲ್ ಕಷಾಯಗಳು ಅಲ್ಲಿ ಸಿದ್ಧವಾಗಿರುತ್ತವೆ. ಸರ್ವ ರೋಗ ನಿವಾರಣೆಗೆಂದೇ ಒಂದು ವಿಶೇಷ ಮಿಶ್ರಣವಿದೆ. ಅದಕ್ಕೆ 'ಜನರಲ್' ಅಂತ ಹೆಸರಿಟ್ಟಿದ್ದಾರೆ. ಅದಕ್ಕೆ ಡಿಮ್ಯಾಂಡ್ ಜಾಸ್ತಿ. ವಾಕಿಂಗ್ ಮುಗಿಸಿಕೊಂಡು ಒಂದು ಗ್ಲಾಸ್ ಕಷಾಯ ಕುಡಿದು ಮನೆಗೆ ಹೋಗುವ ಹೆಲ್ತ್ ಕಾನ್ಷಸ್ ವಾಕಿಂಗ್ ಪಟುಗಳನ್ನೂ, ಮಸಾಲ್ ದೋಸೆ ಬೋಂಡಗಳಿಗೆ ವಾಕಿಂಗ್ ಮಧ್ಯೆ ನಾಲಿಗೆ ಚಾಚುವ ಚಪಲ ಚಿತ್ತ ತಿಂಡಿಪೋತರನ್ನೂ ನಾನು ಆಗಾಗ್ಗೆ ಭೇಟಿ ಮಾಡುತ್ತೇವೆ. ಈಗಂತೂ ಆ ಆಯುರ್ವೇದ ಪಂಡಿತರಿಗೆ ರೋರಿಂಗ್ ಬಿಸಿನೆಸ್! ವಿಶ್ವ ಆರೋಗ್ಯ ಸಂಸ್ಥೆ ಈ ವರ್ಷ 'ಎದೆಹಾಲಿನ ವರ್ಷ' ಅಂತ ಘೋಷಿಸಿದ್ದಾರಲ್ಲ ಅದಕ್ಕೆ ಅವರಿಗೆ ಒಳ್ಳೆ ಛಾನ್ಸ್! ನಮ್ಮ ಪಂಡಿತರು ತಮ್ಮ ಹರ್ಬಲ್ ಕಷಾಯ

ಕೇಂದ್ರಕ್ಕೆ ಹೆರಿಗೆ ಆದ ನಂತರ ಎದೆ ಹಾಲಿನ ಉತ್ಪತ್ತಿ ವೃದ್ಧಿಯಾಗಲು ಸಬ್ಬಸಿಗೆ ಸೊಪ್ಪಿನ ತಿಳಿಸಾರನ್ನು ಮೊನ್ನೆ introduce ಮಾಡಿದರು! ಈಗ ಬಾಣಂತಿಯರು ವಾಕಿಂಗ್ ಬಂದು ಒಂದು ಗ್ಲಾಸ್ ಸಬ್ಬಸಿಗೆ ಸಾರು ಕುಡಿದು ಹೋಗುತ್ತಾರೆ. ಒಂದು ಗ್ಲಾಸಿಗೆ 10 ರೂಪಾಯಿ. ಮಹಿಳಾ ಲೋಕವು ಹೆಮ್ಮೆ ಪಡಬೇಕಾದ ವಿಚಾರ. ಪುರುಷ ಪ್ರಧಾನವಾದ ಸಮಾಜವಿದು ಎಂದು ಮಹಿಳೆಯರು ಟೀಕಿಸುವುದು ಸರಿಯಲ್ಲವೆಂದು ನಾನು ನಿರ್ಭಯವಾಗಿ ಹೇಳುತ್ತೇನೆ. ಅವರಿಗೂ ಕಷಾಯಗಳಲ್ಲಿ ಸಮಾನ ಹಕ್ಕಿದೆ!

ಈಗ ನಮ್ಮ ವಾಕಿಂಗ್ ಬೀದಿಯಲ್ಲಿ ಎಲ್ಲರೂ ಗುಂಪಾಗಿ ನಿಂತು ಚಪ್ಪಾಳೆ ತಟ್ಟುತ್ತ ಗಹಗಹಿಸಿ ನಗುತ್ತಾರೆ. 'ಕಾರಣವಿರಲಿ, ಕಾರಣವಿಲ್ಲದೆ ಇರಲಿ, ನಗಿ, ಆಗ ನಿಮ್ಮನ್ನು ನೋಡಿ ಇತರರೂ ನಗುತ್ತಾರೆ' ಎಂದು ಕೈಲಾಸಂ ಹೇಳಿದ ಮಾತು ಜ್ಞಾಪಕಕ್ಕೆ ಬರುತ್ತಿದೆ. ಈ ಔಷಧಿ ಕ್ರಮಕ್ಕೆ 'ಲಾಫಿಂಗ್ ಥೆರಪಿ' ಅಂತ ಹೆಸರಿಟ್ಟಿದ್ದಾರೆ! ನೀವು ನಗಬೇಕಾದರೆ ನಮ್ಮ ವಾಕಿಂಗ್ ಬೀದಿಗೆ ಬರಲೇಬೇಕು. ಪರಬ್ರಹ್ಮನ ಸಾಕ್ಷಾತ್ಕಾರವಾದಾಗ ಸೃಷ್ಟಿ ವೈಚಿತ್ರವನ್ನು ಕಂಡು ಮಾನವ ತನ್ನಷ್ಟಕ್ಕೆ ತಾನೆ ಆಗಸದ ಕಡೆ ಬೆರಳು ಮಾಡಿ ನಕ್ಕುಕೊಳ್ಳುತ್ತಾನಂತೆ! ಇದು ಮಾನಸಿಕ ಅಸ್ವಸ್ಥತೆಯ ಗುರುತೆಂದು ಯಾರೂ ತಿಳಿಯಬಾರದು! ವಾಕಿಂಗ್ ಹೋಗುವಾಗ ಹಲವಾರು ಇಂಥ ಚೈತನ್ಯಗಳನ್ನು ದರ್ಶನ ಮಾಡಿ ನಾನು ಬದುಕಿನ ಅರ್ಥವನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದೇನೆ. ಅಂತೇ ನಗುಬೀದಿ, ಮನೆ ಹೊರಗಿನ ಕೇರಿಯಲ್ಲೇ ನಗುತ್ತಿದ್ದ ರಾಶಿ ಕನಸು ಈಗ ನನಸಾಗುತ್ತಿದೆ. ಎಲ್ಲೆಲ್ಲೂ ಈಗ ನಗು ಚಿಮ್ಮುತ್ತಿದೆ. ವಾಕಿಂಗ್ ವರ್ಧಿಸಲಿ. ವಾಕಿಂಗ್ ಮಿತ್ರರು ನಗುವನ್ನು ಎಲ್ಲರಿಗೂ ಹಂಚಲಿ. ಬೇಂದ್ರೆಯವರು ಹೇಳಿದಂತೆ ಎಲ್ಲರ ಮುಖದಲ್ಲೂ ಮಂದಸ್ಮಿತ ಮಿಂಚಲಿ. Walk and be calm!

**ಸಾಲ**

ಭಾರತೀಯರಿಗೆ ಸಾಲ
ಎಷ್ಟು ಕೊಟ್ಟರೂ ಸಾಲ!
ಯಾಕೆಂದರೆ
ಅವರು ತಿಳಿದಿದ್ದಾರೆ
ಇಲ್ಲಿ ಹುಟ್ಟಿದ್ದಕ್ಕೆ ಇದು ಮಾಮೂಲ!

– ಮರು ಬೀರಾದಾರ

# ಗಂಡಭೇರುಂಡ

- ಶ್ರೀನಿವಾಸ ವೈದ್ಯ

ಇದು ನಡೆದು ಸುಮಾರು ಎಪ್ಪತ್ತು ಎಪ್ಪತ್ತೈದು ವರುಷಗಳಾದರೂ ಆಗಿರಬಹುದು. ಆಗ ನಮ್ಮ ಮಾವ ವೆಂಕಟರಾಮಯ್ಯನವರು ಶ್ರೀರಂಗಪಟ್ಟಣದ ದೇವಸ್ಥಾನದ ಬೀದಿಯಲ್ಲಿ ಮನೆಮಾಡಿ ಪುಟ್‌ಲಾಯರಿಯಾಗಿ ಚಟುವಟಿಕೆಯಿಂದ ಓಡಿಯಾಡಿಕೊಂಡಿದ್ದರು. ವೆಂಕಟರಾಮಯ್ಯನವರು ಬಲು ಜರ್ಬಿನ ಮನುಷ್ಯ. ಕಲಾಬತ್ತಿನ ಪಂಚೆ ಸುತ್ತಿ, ಶಿರೋಭಾಗವನ್ನು ಜರೀಪೇಟದಿಂದ ಅಲಂಕರಿಸಿ; ಇಲ್ಲವೆ ಜುಟ್ಟಿಗೆ ಜಡೆ ಹೆಣೆದು, ಒಂದು ಮಲ್ಲಿಗೆ ಕುಚ್ಚು ಚುಚ್ಚಿ ಭ್ರೂಮಧ್ಯೆ ಕುಂಕುಮವಿಟ್ಟು, ಒಂದು ಜರೀ ಶಲ್ಯ ಹೊದ್ದು ನಡೆದರೆ ಯಾರಲ್ಲೂ ಗೌರವ ಉಕ್ಕೀತು.

ಈ ಕತೆಯಲ್ಲಿ ನಮ್ಮ ಮಾವನವರ ಪಾತ್ರ ನಿಮಿತ್ತ ಮಾತ್ರವಾದುದು. ಇದನ್ನು ನನಗೆ ಹೇಳಿದವರು ಅವರೇ. ಹಾಗಾಗಿ ಅವರ ಪ್ರಸ್ತಾಪ ಮೊದಲಿಗೆ ಬಂತು ಅಷ್ಟೆ. ಶ್ರೀರಂಗಪಟ್ಟಣದ ದೇವಸ್ಥಾನದ ಬೀದಿಯಲ್ಲೇ, ನಮ್ಮ ಮಾವನವರ ಮನೆ ಪಕ್ಕದಲ್ಲಿ ರಂಗಸ್ವಾಮಿ ಎಂಬ ಮೆಟ್ರಿಕ್ಯುಲೇಶನ್ ಪರೀಕ್ಷೆ ಪ್ಯಾಸು ಮಾಡಿದ ತರುಣರು ವಾಸಿಸುತ್ತಿದ್ದರು. ರಂಗಸ್ವಾಮಿಯವರು ಮೂಲತಃ ಮೇಲುಕೋಟೆಯ ಶ್ರೀವೈಷ್ಣವರು. ಅವರಿಗೆ ಶ್ರೀರಂಗಪಟ್ಟಣದ ತಾಲ್ಲೋಕು ಕಂದಾಯ ಖಾತೆಯಲ್ಲಿ ಕೆಲಸವಾಗಿ ಇಲ್ಲಿ ಪತ್ನಿಸಮೇತ ವಾಸವಾಗಿದ್ದರು.

ರಂಗಸ್ವಾಮಿಯ ಪತ್ನಿ ಅಲಮೇಲು ಸಾಧ್ವಿ ಹೆಂಗಸು. ಆಗಿನ ಕಾಲದ ಸಾಧ್ವಿಸ್ತ್ರೀಯರು ಎಷ್ಟರ ಮಟ್ಟಿಗೆ ತಮ್ಮ ತಮ್ಮ ಗಂಡಂದಿರ ಪ್ರಾಣಗಳನ್ನು ಕುಕ್ಕಿ ಕುಕ್ಕಿ ತಿಂದಾರೋ ಇವಳೂ ಅಷ್ಟೇ ತಿಂದಾಳು. ತೂಕ ಹೆಚ್ಚಿಲ್ಲ. ತೂಕ ಕಡಿಮೆಯಿಲ್ಲ. ರಂಗಸ್ವಾಮಿ ಪಾಪ, ಭೀರು ಸ್ವಭಾವದ ಮನುಷ್ಯ. ಹೆಂಡತಿಗೆ ಹೆದರಿಕೊಂಡು ಬದುಕಿದವ. ಒಟ್ಟಿನಲ್ಲಿ ಆಗಿನ ಕಾಲದ ಸಂಪ್ರದಾಯಸ್ಥ ಕುಟುಂಬ ಅಷ್ಟೆ.

ರಂಗಸ್ವಾಮಿಗೆ ಕಂದಾಯ ಖಾತೆಯಲ್ಲಿ ಕೆಲಸ ಎಂದೆ. ಆದರೂ ಮನುಷ್ಯ ಪ್ರಾಮಾಣಿಕ. ಕಚೇರಿಗೆ ಕಾರ್ಯನಿಮಿತ್ತ ಬರುವ ರೈತಾಪಿ ಜನಗಳಿಗೆ ಈ ಕೆಲಸಕ್ಕೆ ಇಷ್ಟೇ ಕೊಡಿ ಎಂದು ಎಂದೂ ಕೇಳಿದವನಲ್ಲ. ಅವರಾಗಿ ಕೆಲಸವಾದ ಮೇಲೆ ಸಂತೋಷದಿಂದ ಎಷ್ಟು ಕೊಟ್ಟಾರೋ ಅಷ್ಟರಲ್ಲೇ ತೃಪ್ತಿ ಕಂಡವ. ಇದು ತಿಳಿದ ಕಕ್ಷಿಗಳು ಈ ಹಸುಸ್ವಭಾವದ ತರುಣನಿಗೆ ಅಂದಿನ ಮಾಮೂಲಿನ ಅರ್ಧದಷ್ಟೇ

ಕೊಟ್ಟಾರು. ಇನ್ನು ಕೆಲವು ಘಾಟಿಗಳು "ಸ್ವಾಮೀ ನಾನು ಬಡವ, ಒಪ್ಪಿಸಿಕೊಳ್ಳಬೇಕು" ಎನ್ನುತ್ತ ಬರೀ ಎರಡೆರಡು ಲಿಂಬೇಹಣ್ಣು ಕೊಟ್ಟು ಅಪ್ಪಬಿಟ್ಟಾರು.

ಈ ಕತೆ ನಡೆದ ಕಾಲಕ್ಕೆ ರಂಗಸ್ವಾಮಿಯ ಮನೆಗೆ ಲಿಂಬೇಹಣ್ಣು ಬರುತ್ತಿದ್ದುದೇ ಹೆಚ್ಚು. ಹಾಗಾಗಿ ಅವರ ಮನೆಯಲ್ಲಿ ನಿತ್ಯ ಲಿಂಬೇಹಣ್ಣಿನ ಚಿತ್ರಾನ್ನ, ಲಿಂಬೇಹಣ್ಣಿನ ಸಾರು, ಲಿಂಬೇಹಣ್ಣಿನದೇ ಇಡ್ಲೀ ದೋಸೆಗಳು, ಲಿಂಬೇ ಚಟ್ನಿ, ಲಿಂಬೇ ಒಬ್ಬಟ್ಟುಗಳದೇ ಸಮಾರಾಧನೆ.

ಅಲಮೇಲು ಪಾಪ ಸಾಧ್ವಿ, ಅವಳೇನು ತಾನೇ ಮಾಡಿಯಾಳು? ಅದೇ ಲಿಂಬೇಹಣ್ಣಿನಿಂದ ತಲೆ ಚಚ್ಚಿಕೊಂಡಾಳು ಅಷ್ಟೇ!

ರಂಗಸ್ವಾಮಿ ಉಳಿದ ಪ್ರಾಮಾಣಿಕ ಗುಮಾಸ್ತರಂತೆ "ಈ ಕೆಲಸಕ್ಕೆ ಇಷ್ಟೇ ಕೊಡಬೇಕು" ಎಂದು ದರ್ಪದಿಂದ ಕೇಳಿದ್ದರೆ, ಬಹುಶಃ ರಂಗಸ್ವಾಮಯ್ಯಂಗಾರರು ಆಗಿರುತ್ತಿದ್ದರೋ ಏನೋ. ಆದರೆ ಈ ಹಸುಮನಸ್ಸಿನವನಿಗೆ ಅಷ್ಟೊಂದು ಗೌರವ ಹೆಚ್ಚಾಯಿತೆಂದೋ ಏನೋ, ಜನ ಅವನಿಗೆ ಕೇವಲ ರಂಗ್ಸಾಮಿ ಎಂದರು. ಇನ್ನು ಮನೆಯ ಯಜಮಾನನೇ ರಂಗ್ಸಾಮಿಯಾದ ಮೇಲೆ ಅಲಮೇಲಮ್ಮ ಬರೀ ಅಲಮೇಲು ಆದಳು.

ಇರುತ್ತ, ರಂಗ್ಸಾಮಿಗೆ ಸಂಸಾರದಲ್ಲಿ ಸುಖವಿಲ್ಲದಾಯಿತು. ಗಂಡಹೆಂಡತಿ ಎಂದಮೇಲೆ ಒಂದು ಮಾತು ಹೆಚ್ಚು ಒಂದು ಮಾತು ಕಡಿಮೆ ಇದ್ದದ್ದೇ. ಸಂಸಾರ ಎಂದಮೇಲೆ ಸಣ್ಣಪುಟ್ಟ ತಾಪತ್ರಯಗಳೂ ಮನಸ್ತಾಪಗಳೂ ಇರದೇ ಉಂಟೇ?

ರಂಗ್ಸಾಮಿ ಬದುಕಿನಲ್ಲಿ ಹೆಚ್ಚಿನದೇನನ್ನೂ ಅಪೇಕ್ಷಿಸಿದವನಲ್ಲ. ಅಲಮೇಲು ಕೂಡ ನುಚ್ಚಿನುಂಡೆಯನ್ನೂ, ಬೆಂಡೆಕಾಯಿ ಹುಳಿಯನ್ನೂ ಸುಮಾರಾಗಿ ರುಚಿಕಟ್ಟಾಗಿ ಮಾಡಿದವಳೇ! ಅಂದಿನ ದಿನಕ್ಕೆ ಮನೆಯ ಹೆಂಗಸರಿಗೆ ನುಚ್ಚಿನುಂಡೆಯನ್ನೂ, ಬೆಂಡೆಹುಳಿಯನ್ನೂ ಸುಮಾರಾಗಿ ಮಾಡಲು ಬಂದರೆ, ಗಂಡಹೆಂಡತಿ ಸುಖವಾಗಿದ್ದಾರೆಂದೇ ಅರ್ಥ. ರುಚಿರುಚಿಯಾಗಿ ನುಚ್ಚಿನುಂಡೆಯನ್ನು ಮಾಡುವ ಅಪೂರ್ವ ಕಲೆಯಲ್ಲಿ ಹೆಣ್ಣು ತನ್ನನ್ನು ತಾನು ಮರೆತರೆ, ಗಂಡ ಅಂತಹ ನುಚ್ಚಿನುಂಡೆಯನ್ನು ಪೊಗದಸ್ತಾಗಿ ಹೊಡೆಯುವುದರಲ್ಲಿ ಮಗ್ನನಾಗಿರುತ್ತಿದ್ದ. ಅವರಿಗೆ ಉಳಿದ ವಿಷಯಗಳ ಕಡೆಗೆ ಗಮನ ಹರಿಸಲು ಪುರುಸೊತ್ತೆಲ್ಲಿ? ಹಾಗಾಗಿ ಸಂಸಾರದಲ್ಲಿ ಸುಖವಿಲ್ಲ ಎಂದರೇನರ್ಥ?

ರಂಗಸ್ವಾಮಿಗೆ ಸಂಸಾರದಲ್ಲಿ ಸುಖವಿಲ್ಲದೇ ಹೋಯಿತು ಎಂದರೆ ಅದಕ್ಕೆ ಅಲಮೇಲುವಿನ ಸುಚ್ಚಿನುಂಡೆ ಹೊಣೆಯಲ್ಲ. ರಂಗಸ್ವಾಮಿಗೇ ವಿಚಿತ್ರ ಹವ್ಯಾಸವೊಂದಿತ್ತು. ರಂಗಸ್ವಾಮಿಗೆ ಪಾದರಕ್ಷೆಗಳ ಮೋಹ, ಎಂದರೆ ಚಪ್ಪಲು, ಬೂಡ್ಸು ಇಂತಹ ಮೆಟ್ಟುಗಳನ್ನು ಧರಿಸುವ ಖಯಾಲಿ. ಇಂದಿನ ದಿನಕ್ಕೆ ಈ ಮಾತು ಹೆಚ್ಚೆನಿಸಲಿಕ್ಕಿಲ್ಲ. ಆದರೆ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರುಗಳು ರಾಜ್ಯಭಾರ ಮಾಡುತ್ತಿದ್ದ ಅಂದಿನ ದಿನಕ್ಕೆ ಎಷ್ಟೋ ಪುಣ್ಯವಂತರೂ ಕೂಡ ಪಾದರಕ್ಷೆ ಧರಿಸುತ್ತಿದ್ದುದು ಕಡಿಮೆಯೇ. ಅವು ಮಡಿವಂತ ದಿನಗಳು. ಅಂದಿನ ದಿನಗಳಲ್ಲಿ ರಂಗಸ್ವಾಮಿಯ ಈ ಅತಿರೇಕ ನಗೆಗೀಡಾದದ್ದು ಸಹಜವೇ!

ಇಷ್ಟೇ ಆಗಿದ್ದರೆ ಹೇಗೋ ನಡೆದುಹೋಗುತ್ತಿತ್ತು. ಆದರೆ ಆ ಮೆಟ್ಟುಗಳನ್ನು ಒಪ್ಪವಾಗಿ ಓರಣವಾಗಿ ಶಿಸ್ತಿನಿಂದ ಇಡುವುದರಲ್ಲಿ ರಂಗಸ್ವಾಮಿಗೆ ವಿಪರೀತ ಛಾನಸತನ ಬಂದುಬಿಟ್ಟಿತ್ತು. ಆದರೆ ಇದೆಲ್ಲ ಆ ಪಾಪದ ಹುಡುಗಿ ಅಲಮೇಲುವಿಗೆ ಹೇಗೆ ತಿಳಿಯಬೇಕು? ಅವಳು ಮನೆಗೆಲಸದ ತರಾತುರಿಯಲ್ಲಿ ಮೆಟ್ಟುಗಳನ್ನು ಹೇಗೆಂದರೆ ಹಾಗೆ ಎಲ್ಲೆಂದರಲ್ಲಿ ಎಸೆದುಬಿಡುವಳು. ರಂಗಸ್ವಾಮಿ ಹೆಂಡತಿಗೆ ಸಾಕಷ್ಟು ತಿಳಿಸಿ ಹೇಳಿದ, ಅಲ್ಲದೇ ಆಯಾ ವಸ್ತುಗಳನ್ನು ಸರಿಯಾಗಿ ಇಟ್ಟೂ ತೋರಿಸಿದ. ಆದರೆ ಏನೇ ಆದರೂ ಅಲಮೇಲುಗೆ ಇದೆಲ್ಲ ಒಗ್ಗಲೇ ಇಲ್ಲ. ಇದಕ್ಕೆಲ್ಲ ವ್ಯರ್ಥ ದುಡ್ಡು ಸರಿಯುವದು ಅವಳಿಗೆ ಇಷ್ಟವಿರಲಿಲ್ಲವೋ ಏನೋ, ಅಥವಾ ಅವಳಿಗೆ ತನ್ನ ಈ ಬರೀ ಲಿಂಬೇ ಹಣ್ಣಿನ ಗಂಡನ ಮೇಲೆ ತಾತ್ಸಾರವೋ, ಅಂತೂ ರಂಗಸ್ವಾಮಿ ಪರಿಪರಿಯಾಗಿ ಹೇಳಿಕೊಂಡರೂ ಅವಳು 'ಏನು ಮಹಾ' ಎನ್ನುತ್ತ ಮೊದಲಿನ ಹಾಗೇ ಇದ್ದುಬಿಡುವಳು. ಇದು ನಿತ್ಯದ ರಂಪವಾಗಿ ರಂಗಸ್ವಾಮಿ ರೋಸಿಹೋಗಿದ್ದ.

ನಿತ್ಯ ಆಹ್ನಿಕ ಮುಗಿಸಿ ಊಟಮಾಡಿ ಕಚೇರಿಗೆ ತೆರಳುವ ಮುನ್ನ ಮೆಟ್ಟು ಧರಿಸಲೆಂದು ತೊಟ್ಟಿಗೆ ಬಂದರೆ ಚಪ್ಪಲಿಗಳೂ ಬೂಡ್ಸುಗಳೂ ಒಂದಕ್ಕೊಂದು ಎದುರು ಬದುರಾಗಿ ಸಮ್ಮುಖವಾಗಿರದೇ, ಎಡದ್ದು ಬಲಕ್ಕೆ ಬಲದ್ದು ಎಡಕ್ಕೆ ಗಂಡಭೇರುಂಡಗಳಾಗಿ ಗೋಡೆಗೊರಗಿ ಪಿಳಿ ಪಿಳಿ ಕಣ್ಣು ಬಿಡುತ್ತ ರಂಗಸ್ವಾಮಿಯನ್ನು ಕೆಣಕುತ್ತಿದ್ದವು. ಸಂಪ್ರದಾಯಸ್ಥವಾದ ಅಂದಿನ ಮಡೀ ದಿನಗಳಲ್ಲಿ ಸ್ನಾನಾಹ್ನಿಕಗಳಾದ ಮೇಲೆ ಮೆಟ್ಟುಗಳನ್ನು ಕೈಯಿಂದ ಮುಟ್ಟಬಾರದೆಂದು ನೇಮ. ಗಂಡಭೇರುಂಡಗಳಾದ ಮೆಟ್ಟುಗಳು ಚಪ್ಪಲಿಗಳಾದರೆ ಹಾಗೂ ಹೀಗೂ ಹೇಗೋ ಹೇಗೋ ಒದ್ದಾಡಿ ಪಾದಗಳಿಗೆ ತೂರಿಸಿಕೊಳ್ಳಬಹುದು. ಯಮುನೆಯ ತಟದಲ್ಲಿ ಶ್ರೀಕೃಷ್ಣ ಕೊಳಲೂದುತ್ತ ಕತ್ತರಿಕಾಲು ಹಾಕಿ ನಿಂತಿರುತ್ತಾನಲ್ಲ ಹಾಗೇ ಒಂದೆರಡು ಸಲ ಕತ್ತರಿ ಕಾಲರಾದರೆ

ಚಪ್ಪಲಿಗಳನ್ನು ಮೆಟ್ಟಬಹುದು. ಆದರೆ ಎಷ್ಟೆಷ್ಟು ಕಸ್ತರಿಗಾಲರಾದರೂ ಷೂಸುಗಳನ್ನೋ ಬೂಡ್ಸುಗಳನ್ನೋ ಧರಿಸಲು ಬಂದಿತೇ? ಈ ನಿತ್ಯದ ಸಂಕಟದಲ್ಲಿ ಮೆಟ್ಟುಗಳನ್ನು ಮೆಟ್ಟಲು ಆಗದೇ ರಂಗ್ಸಾಮಿ ಹುಚ್ಚು ಕೋಪದಲ್ಲಿ ಒದ್ದುಕೊಳ್ಳುತ್ತಿದ್ದ.

ಇರಲಿ ಅಂತೂ ಇತ್ತೀಚಿನ ದಿನಗಳಲ್ಲಿ ರಂಗ್ಸಾಮಿಯ ಮೆಟ್ಟುಗಳೂ, ಇಜ್ಜೋಡುಗಳು ಗಂಡ ಹೆಂಡಿರಲ್ಲಿ ಸಾಕಷ್ಟು ವಿರಸಕ್ಕೆ ಕಾರಣವಾಗಿದ್ದವು.

ಹೀಗಿರುತ್ತಿರಲಾಗಿ ಒಂದು ದಿನ ಕಚೇರಿಯಲ್ಲಿ ರಂಗ್ಸಾಮಿಗೆ ವಿಪರೀತ ಮುಖಭಂಗವಾಗುವಂತಹ ಒಂದು ಘಟನೆ ನಡೆಯಿತು. ಆ ಹೊತ್ತು ಒಬ್ಬ ಗೌಡ ತನ್ನ ಕೆಲಸ ಮಾಡಿಸಿಕೊಂಡು ರಂಗ್ಸಾಮಿಗೆ ಎರಡು ಲಿಂಬೆ ಹಣ್ಣು ಕೊಟ್ಟು ಕೈ ಮುಗಿದು ಹೊರಟಿದ್ದ. ಆಗ ರಂಗ್ಸಾಮಿಗೆ ಏನು ಕರ್ಮ ಕೆಟ್ಟಿತ್ತೋ, ಆತ ''ಅಯ್ಯಾಗೌಡ ಲೆಕ್ಕದಲ್ಲಿ ಈ ಕೆಲಸಕ್ಕೆ ನನಗೆ ನೀನು ಎರಡು ರೂಪಾಯಿ ಕೊಡಬೇಕು. ಅದು ಬಿಟ್ಟು ಬರೀ ಜುಜುಬಿ ಲಿಂಬೇ ಹಣ್ಣು ಕೊಡುತ್ತಿದ್ದಿಯಲ್ಲಾ? ಇದು ದೇವರು ಮೆಚ್ಚುವ ಕೆಲಸವೇ?'' ಎಂದನು. ರಂಗ್ಸಾಮಿಗೆ ಅಂದಿನವರೆಗೆ ಶ್ರೀರಂಗ ಪಟ್ಟಣದ ಗೌಡರ ಜತೆಗೆ ಮಾತ್ರ ವ್ಯವಹರಿಸಿ ಅನುಭವವಿತ್ತು. ಆದರೆ ಅಂದಿನ ಆ ಗೌಡ ಮಂಡ್ಯದವನು. ಆತನು ರಂಗ್ಸಾಮಿಗೆ ಬಲುಜರ್ಬಿನಿಂದ ''ಅಯ್ಯಾಹಾರುವ, ಅದೇನು ದಿವಾಣರಂತೆ ಮಾತನಾಡುತ್ತೀಯಲ್ಲ? ನಿನ್ನ ಕೆಲಸಕ್ಕೆ ಮಹಾರಾಜರ ಕಡೆಯಿಂದ ಸಂಬಳ ತಿನ್ನೋದಿಲ್ಲವೇ? ಒಂದು ಕಿಲುಬು ಕಾಸೂ ಕೊಡೊಲ್ಲ.... ಅದೇನು ಕಿಸಿತೀಯೋ ಕಿಸಿ ಓಗು'' ಎಂದು ತೀರ ಅನಾಗರಿಕವಾಗಿ ಮಾತನಾಡಿ ಹೋದನು. ಮಂಡ್ಯದ ಗೌಡನಿಗೂ ರಂಗ್ಸಾಮಿಗೂ ಈ ಮಾತು ನಡೆದಾಗ ಕಚೇರಿಯ ಗುಮಾಸ್ತ ಸಮಸ್ತರೆಲ್ಲ ಸುತ್ತಾ ನೆರೆದು ಮುಸಿ ಮುಸಿ ನಕ್ಕಿದ್ದರು. ರಂಗ್ಸಾಮಿಗೆ ಆ ಕ್ಷಣಕ್ಕೆ ಭೂಮಿ ಬಾಯಿಬಿಟ್ಟು ತನ್ನನ್ನು ಒಳಕ್ಕೆ ಸೆಳೆದುಕೊಳ್ಳಬಾರದೇ ಎನ್ನಿಸಿತ್ತು. ಅವನು ಆ ದಿನವನ್ನೆಲ್ಲ ಹೇಗೆ ಹೇಗೊ ಕಳೆದು ಸಂಜೆಯಾದೊಡನೆ ಅಪಮಾನದಲ್ಲಿ ಬೆಂದವನಾಗಿ ಮನೆಯ ಕಡೆಗೆ ಕಾಲೆಳೆದನು.

ಅವನು ಬಂದಾಗ ಅಲಮೇಲು ಹಜಾರದಲ್ಲಿ ಅದೇನೋ ಕೆಲಸದಲ್ಲಿದ್ದಳು. ರಂಗ್ಸಾಮಿ ಕಾಲೆಳೆಯುತ್ತ ತೊಟ್ಟಿಗೆ ನಡೆದನು. ಆಗಲೇ ಆ ಅಚಾತುರ್ಯ ನಡೆದದ್ದು! ತೊಟ್ಟಿಯಲ್ಲಿ ಅವನ ಷೂಸುಗಳೂ ಬೂಡ್ಸುಗಳೂ ಗಂಡ ಭೇರುಂಡಗಳಾಗಿ ಗೋಡೆಗೊರಗಿ ರಂಗ್ಸಾಮಿಯನ್ನು ಅಣಗಿಸುತ್ತ ಲೇವಡಿ ಮಾಡುತ್ತಿದ್ದವು. ಆಗ ಇದ್ದಕ್ಕಿದ್ದಂತೆ ರಂಗ್ಸಾಮಿಯ ತಲೆ ಸ್ಫೋಟಗೊಂಡು ಅವನು ''ಎಲ ಎಲ ಹೆಣ್ಣೇ ಮೆಟ್ಟುಗಳನ್ನು ಸರಿಯಾಗಿಡಲು ನಿನಗೆ ಸಾವಿರ ಸಲ

ಹೇಳಿದರೂ ನಿನ್ನ ಆಪುಟವೇ ನಿನಗಾಯಿತಲ್ಲ'' ಎಂದು ಭೀಷಣವಾಗಿ ಘೀಳಿಟ್ಟನು.

ಅವತ್ತು ಅದೇನು ವಿಷಘಳಿಗೆಯೋ ಅಲಮೇಲು ಕೂಡ, ''ಸರಿ ಸರಿ ನೀವು ತರುವ ಎರಡು ದರಿದ್ರದ ಲಿಂಬೇ ಹಣ್ಣುಗಳಿಗೆ ಇನ್ನೇನೇನು ಮಾಡಬೇಕು ಹೇಳಿ'' ಎಂದು ನಿತ್ಯಕ್ಕಿಂತ ತುಸು ಹೆಚ್ಚಾಗಿಯೇ ಬುಸುಗುಟ್ಟಿ ಪೂತ್ಕರಿಸುತ್ತ ಕೈಯಲ್ಲಿಯ ಪಾತ್ರೆಯನ್ನು ನೆಲಕ್ಕೆ ಅಪ್ಪಳಿಸಿಬಿಟ್ಟಳು.

ರಂಗ್ಸಾಮಿಗೆ ಆ ಕ್ಷಣಕ್ಕೆ ಜೀವನವೇ ಅಸಹ್ಯವೆನಿಸಿತು, ಬದುಕೇ ಬೇಡವಾಯಿತು ಅವನು ಹುಚ್ಚು ಕೋಪದಲ್ಲಿ ನಖಶಿಖಾಂತ ಥರಥರ ನಡುಗುತ್ತ ''ಥೂ'' ಎಂದು ಉಗಿದು ಬೀದಿ ಬಾಗಿಲನ್ನು ಫಟಾರನೇ ಬಡಿದು ಕಾಲೆಳೆದತ್ತ ನಡೆದುಬಿಟ್ಟನು. ಉನ್ಮತ್ತ ಕೋಪದಲ್ಲಿ ಹೀಗೇ ಹತ್ತು ನಿಮಿಷ ನಡೆದ ಮೇಲೆ ಆತ ಶ್ರೀರಂಗಪಟ್ಟಣದ ರೈಲು ನಿಲ್ದಾಣಕ್ಕೆ ಬಂದಿದ್ದ. ಅದೇ ಸಮಯಕ್ಕೆ ಸರಿಯಾಗಿ ನಿಲ್ದಾಣದಲ್ಲಿ ಯಾವದೋ ರೈಲು ಇನ್ನೇನು ಹೊರಡುವ ಸಿದ್ಧತೆಯಲ್ಲಿ ''ಕುಯ್ಯೋ'' ಎಂದು ಸಿಳ್ಳೆ ಹಾಕುತ್ತಿತ್ತು. ರಂಗ್ಸಾಮಿ ಯಾವದೋ ತಂದ್ರಿಯಲ್ಲಿ ಅವಸರವಸರವಾಗಿ ಓಡೋಡಿ ಬಂದು ಒಂದು ರೈಲು ಡಬ್ಬಿಯನ್ನು ಏರಿದನು.

ರೈಲು ಇನ್ನೊಮ್ಮೆ ಕಿರುಚಿ ಸಿಳ್ಳೆ ಹಾಕುತ್ತ ಎಲ್ಲಿಗೋ ಹೊರಟು ಹೋಯಿತು.



ಅವತ್ತು ರಾತ್ರಿ ರಂಗ್ಸಾಮಿ ಮನೆಗೆ ಬರಲೇ ಇಲ್ಲ. ಅಲಮೇಲು ''ಹೋಗಲಿ ಎಲ್ಲಿ ಹೋದಾರು'' ಎಂದು ಅಸಡ್ಡೆಯಿಂದಲೇ ಇದ್ದಳು. ಎರಡನೇ ದಿನ ಸಂಜೆಯವರೆಗೆ ಕಾಯ್ದಳು. ಆ ಮೇಲೆ ಗಾಬರಿಯಾಗಿ ನಮ್ಮ ಮಾವ ವೆಂಕಟರಾಮಯ್ಯನವರಲ್ಲಿ ಬಂದು ಹೇಳಿಕೊಂಡಳು. ಅವರು ಅಕ್ಕ ಪಕ್ಕ ಗಲ್ಲಿ ಬೀದಿ ಎಲ್ಲಕಡೆ ವಿಚಾರಿಸಿದರು. ಮರುದಿನ ಬೀದಿಯವರೆಲ್ಲ ಸೇರಿ ರಂಗಸಾಮಿಯ ಕಚೇರಿಗೆ ಹೋಗಿ ವಿಚಾರಿಸಿದರು. ಆಗ ಮೂರು ದಿನಗಳ ಹಿಂದೆ ರಂಗ್ಸಾಮಿಗೂ ಮಂಡ್ಯದ ಗೌಡನಿಗೂ ನಡೆದ ಮಾತನ್ನು ಅವನ ಸಹೋದ್ಯೋಗಿಗಳು ಹೇಳಿದರು. ಬೀದಿಯ ಜನ ''ಎರಡು ರೂಪಾಯಿ ಕೊಟ್ಟಿದ್ದರೆ ಇವನೇನು ಸಾಯುತ್ತಿದ್ದನೇ ಪಾಪಿ'' ಎಂದು ಕಾಣದ ಗೌಡನಿಗೆ ಹಿಡಿಶಾಪ ಹಾಕುತ್ತ ಮರಳಿದರು. ಆಮೇಲೆ ನಾಲ್ಕು ದಿನ ಅಲ್ಲಿ ಇಲ್ಲಿ ಕೆರೆಬಾವಿ ಎಲ್ಲೆಂದರಲ್ಲಿ ಹುಡುಕಿ ಕೈಚಲ್ಲಿದರು.

ಇನ್ನು ನಾಲ್ಕು ದಿನ ಕಳೆಯಿತು. ರಂಗ್ಸಾಮಿಯ ಅನುಪಸ್ಥಿತಿ ಅಲಮೇಲುವಿಗೆ ಕ್ರಮೇಣ ಒಗ್ಗಿಹೋಯಿತು. ಒಂದು ದಿನ ಮಧ್ಯಾಹ್ನ ಅವಳು ಜೇಸರ

ಕಳೆಯಲೆಂದು ದೇವರ ನಾಮ ಹಾಡತೊಡಗಿದಳು. ಅವಳ ದೇವರ ನಾಮ ಕೇಳಿ ಅಕ್ಕ ಪಕ್ಕದವರು ಗಾಬರಿಯಾಗಿ ಓಡೋಡಿ ಬಂದು ಅವಳನ್ನು ಸಂತೈಸಿದರು. ಪಾಪ ಮುದಿ ಹೆಂಗಸೆಂದು ಒಬ್ಬರು ಮೆಣಸಿನ ಪುಡಿ ಕುಟ್ಟಿಕೊಟ್ಟರು, ಇನ್ನೊಬ್ಬರು ಹಪ್ಪಳ, ಮತ್ತೊಬ್ಬರು ಸಂಡಿಗೆ ಮಗದೊಬ್ಬರು ಅವಲಕ್ಕಿ ಹೀಗೆ ಏನೇನೋ ಕೊಟ್ಟು ಅವಳ ಆ ದಾರುಣವಾದ ದೇವರ ನಾಮಗಳಿಂದ ತಪ್ಪಿಸಿಕೊಂಡರು.

ಈ ಮಧ್ಯೆ ವೆಂಕಟರಾಮಯ್ಯನವರು ಮುತುವರ್ಜಿವಹಿಸಿ ಏನೇನೋ ಬುದ್ಧಿ ಓಡಿಸಿ ಅಲಮೇಲುಗೆ ಹನ್ನೆರಡು ರೂಪಾಯಿಗಳ ಒಂದು ಪೆನಷನ್ ದೊರಕಿಸಿ ಕೊಟ್ಟಿದ್ದರು. ಈಗ ಅಲಮೇಲು ತಕ್ಕಮಟ್ಟಿಗೆ ನೆಮ್ಮದಿಯಿಂದಿದ್ದಾಳೆ. ಅದೇ ತಾನೇ ಪ್ರವರ್ಧಮಾನಕ್ಕೆ ಬರುತ್ತಿದ್ದ ''ಶ್ರೀನಿವಾಸ'' ಎಂಬುವರ ಕತೆಗಳನ್ನು ಓದಿ ಸಂತೋಷಪಡುತ್ತಾಳೆ. ಗಳಗನಾಥರ ಕಾದಂಬರಿಗಳನ್ನು ಓದಿ ಸನಾತನ ಧರ್ಮದ ಬಗ್ಗೆ ತಿಳಿದುಕೊಳ್ಳಲು ಹವಣಿಸುತ್ತಾಳೆ. ತಲೆ ಸ್ನಾನ ಮಾಡಿ ತಾರಸಿಯ ಮೇಲೆ ನಿಂತು ರಪರಪಾಂತ ಕೂದಲು ಕೊಡಹಿಕೊಳ್ಳುತ್ತಾಳೆ. ಒಮ್ಮೊಮ್ಮೆ ಬಿಟ್ಟುಹೋದ ತನ್ನ ಗಂಡನ ಮೇಲಿನ ಕೋಪದಿಂದ ಕೂದಲನ್ನು ಅತ್ಯಂತ ಕ್ರೂರವಾಗಿ ''ರಪರಪಾಽಽರಪಾಂತ'' ಥಳಿಸುತ್ತಾಳೆ. ಮನೆಯಲ್ಲಿ ಮೆಣಸಿನ ಪುಡಿಯೋ ಸಾರಿನ ಪುಡಿಯೋ ಮುಗಿದು ಹೋದರೆ ದೇವರ ನಾಮ ಹಾಡುತ್ತಾಳೆ. ಈಗೀಗ ಅವಳು ಮಾಡುವ ನುಚ್ಚಿನುಂಡೆ ಇನ್ನಷ್ಟು ರುಚಿಕಟ್ಟಾಗಿರುತ್ತದೆ.

ವಯೋಮಾನಕ್ಕೆ ಸಹಜವಾಗಿ ಅವಳಿಗೆ ಆಗೀಗ ರಂಗಸ್ವಾಮಿಯ ನೆನಪು ಕಾಡುತ್ತದೆ. ಆಗೆಲ್ಲ ಅವಳು ''ಪಾಪ ಎಲ್ಲಿದ್ದಾರೊ... ಹೇಗಿದ್ದಾರೋ... ಅವರಿಗೆ ಬೆಂಡೆಕಾಯಿ ಎಂದರೆ ಪ್ರಾಣ'' ಎಂದುಕೊಂಡು ಬೆಂಡೆಕಾಯಿ ಹುಳಿ ಮಾಡಿಕೊಂಡು ಹೊಡೆಯುತ್ತಾಳೆ.

ಕಾಲ ಗತಿಸಿತು. ವರ್ಷಗಳ ಮೇಲೆ ವರ್ಷಗಳೇ ಉರುಳಿದವು.



ಇರುತ್ತ, ನಮ್ಮ ಮಾವನವರಿಗೆ ಏನೋ ಒಂದು ಕೆಲಸದ ನಿಮಿತ್ತವಾಗಿ ಇಂಡ್ಯ ದೇಶಕ್ಕೆ ಪ್ರಯಾಣ ಮಾಡಬೇಕಾದ ಒಂದು ದುರ್ಭರ ಪ್ರಸಂಗ ಬಂದೊದಗಿತು. ಅಂದಿನ ದಿನಗಳಲ್ಲಿ ಸಕಲ ಸಂಪದ್ಭರಿತವಾದ ಮಹಿಷೂರಿನಾಚೆಗೆ ಇಂಡ್ಯ ದೇಶಕ್ಕೆ ನಮ್ಮವರು ಹೋದದ್ದೇ ಕಡಿಮೆ. ಅಂತಹದರಲ್ಲಿ ನಮ್ಮ ಮಾವ ವೆಂಕಟರಾಮಯ್ಯನವರಿಗೆ ನಮ್ಮ ದೇಶ ಬಿಟ್ಟು ದೂರಿನ ಹುಬ್ಬಳ್ಳಿಗೆ ಹೋಗಬೇಕಾಗಿ ಬಂದಾಗ ಮನೆಯವರೆಲ್ಲ ಸಹಜವಾಗಿಯೇ

ತುಂಬ ಆತಂಕಕ್ಕೊಳಗಾದರು. ಹೊರಡುವದಕ್ಕೆ ತಿಂಗಳೆರಡು ತಿಂಗಳಿರುವಾಗ ನಮ್ಮ ಅತ್ತೆ ನವಗ್ರಹ ಹೋಮ, ಮೃತ್ಯುಂಜಯ ಯಾಗಗಳನ್ನು ಮಾಡಿಸಿ ಸಾಕಷ್ಟು ದಾನ ಧರ್ಮ ಮಾಡಿದರು. ನಿತ್ಯಾ ಮೃತ್ಯುಂಜಯ ಜಪ ಜಪಿಸಿ, ಶನಿಮಹಾತ್ಮೆ ಓದತೊಡಗಿದರು. ಮೇಲುಕೋಟೆ ಚಲುವರಾಯಸ್ವಾಮಿಗೆ ಪುಳಿಯೋಗರೆ ಸೇವೆ ಮಾಡಿಸಿ, ಇನ್ನೂ ಏನೇನೋ ಹರಕೆಗಳನ್ನು ಹೇಳಿಕೊಂಡರು. ಪ್ರಯಾಣದ ದಿನ ಹತ್ತಿರವಾದಂತೆ ಮನೆಯವರೆಲ್ಲರ ದುಗುಡ ಹೆಚ್ಚಾಗತೊಡಗಿತು. ಸ್ನೇಹಿತರು ನೆಂಟರು ಎಲ್ಲರೂ ಬಂದು ಬಂದು ವೆಂಕಟರಾಮಯ್ಯನವರ ದರ್ಶನ ತಕ್ಕೊಂಡು ಮಾತಾಡಿಸಿ ಹೋಗತೊಡಗಿದರು. ಬೀದಿಯ ಮಕ್ಕಳು ಹೆಣ್ಣು ಮಕ್ಕಳೆಲ್ಲ ಬಂದು ಅವರ ಪಾದ ಮುಟ್ಟಿ ಆಶೀರ್ವಾದ ತಕ್ಕೊಳತೊಡಗಿದರು. ಮನೆಯವರು ಹಾಗೂ ಸ್ನೇಹಿತರು ವೆಂಕಟರಾಮಯ್ಯನವರ ಪರೋಕ್ಷದಲ್ಲಿ ''ಹೆದರಿಕೆ ಏನಿಲ್ಲ... ಈಗಿನ ದಿನಗಳಲ್ಲಿ ಹುಬ್ಬಳ್ಳಿಗೆ ಹೋದವರು ಎಷ್ಟು ಜನ ಮರಳಿ ಬಂದಿಲ್ಲ'' ಎಂದು ತಮಗೆ ತಾವೇ ಸಮಾಧಾನ ಮಾಡಿಕೊಳ್ಳತೊಡಗಿದರು. ವೆಂಕಟರಾಮಯ್ಯನವರು ಕೂಡ ತಮ್ಮ ಗಂಡಸು ಮಕ್ಕಳನ್ನು ಕರೆದು ಏನೇನು ಎಲ್ಲೆಲ್ಲಿಟ್ಟಿದ್ದಾರೆಂದು ಹೇಳಿ... ಯಾರಿಗೆ ಎಷ್ಟು ಕೊಡಬೇಕು... ಯಾರಿಂದ ಎಷ್ಟು ಬರಬೇಕು ಎಂದೆಲ್ಲ ಹೇಳಿದರು. ''ಹಾಗೇನಾಗುವದಿಲ್ಲ... ಆದರೂ..'' ಎಂದು ಮಕ್ಕಳಿಗೆ ಧೈರ್ಯ ತುಂಬಿದರು.

ಹೊರಡುವ ದಿನ ನಮ್ಮ ಮಾವನವರು ಎರಡು ದೊಡ್ಡ ರೈಲು ಚಂಬುಗಳಲ್ಲಿ ಕಾವೇರಿಯ ಶುದ್ಧ ನೀರು ತುಂಬಿಕೊಂಡು, ನಾಲ್ಕು ದಿನಕ್ಕಾಗುವಷ್ಟು ಪುಳಿಯೊಗರೆ ಪೊಂಗಲ್ ಕಟ್ಟಿಕೊಂಡು, ಒಂದು ಬುಟ್ಟಿತುಂಬ ನಂಜನಗೂಡಿನ ಬಾಳೆಹಣ್ಣು ತಕ್ಕೊಂಡು, ಕೊರಳಲ್ಲಿ ಚಾಮುಂಡಿ ಬೆಟ್ಟದಿಂದ ತರಿಸಿದ ಭೀತಿಮಂತ್ರ ಕಟ್ಟಿಕೊಂಡು ಊರು ಬಿಟ್ಟರು. ರೈಲು ನಿಲ್ದಾಣದಲ್ಲಿ ಅವರ ನೆಂಟರು ಸ್ನೇಹಿತರೆಲ್ಲ ಅವರಿಗೆ ವಿದಾಯ ಹೇಳುತ್ತ; ''ಜಾಗ್ರತೇ... ಅಲ್ಲೆಲ್ಲ ನೀರು ಕುಡಿಯಬೇಡಿ.... ಹೊರಗೆ ಏನೂ ತಿನ್ನಬೇಡಿ ... ಜನರ ಜತೆಗೆ ಹುಷಾರು.. ಎಂತಹ ಜನವ್ರೋ ಏನೋ... ಕತ್ತಲಾದ ಮೇಲೆ ಹೊರಗೆಲ್ಲೂ ಹೋಗಬೇಡಿ... ಈಗಲೂ ಅಲ್ಲಿ ನರಭಕ್ಷಕರು ಅಲ್ಲಲ್ಲಿ ಅಡಗಿರುತ್ತಾರಂತೆ..'' ಎಂದು ಎಚ್ಚರಿಸಿ ಬೀಳ್ಕೊಟ್ಟರು. ಹೆಣ್ಣು ಮಕ್ಕಳೆಲ್ಲ ದುಗುಡದಿಂದ ಸೆರಗಿಗೆ ಕಣ್ಣೊತ್ತಿಕೊಳ್ಳುತ್ತ ಮನೆಗೆ ಮರಳಿದರು. ನಮ್ಮ ಅತ್ತೆಯ ದುಃಖವಂತೂ ಹೇಳತೀರದು. ಬಂದ್ಬಿಟ್ಟರು ಹಿರಿಯ ಮುತ್ತೈದೆಯರು, ನಮ್ಮ ಅತ್ತೆಯನ್ನು ತಬ್ಬಿಕೊಂಡು ''ಹಾಗೆಲ್ಲ ಮಾಡಬಾರದಮ್ಮಾ ಈಗ ಇನ್ನೂ

ಅಂತಹದೇನಾಗದೇಂತ; ಎಂದು ಅವರನ್ನು ಸಂತೈಸುತ್ತ ಮನೆಗೆ ಮುಟ್ಟಿಸಿ ಹೋದರು.

★★★

ವೆಂಕಟರಾಮಯ್ಯನವರು ಎರಡು ದಿನ ಆ ಅನಾಗರಿಕ ದೇಶದಲ್ಲಿ ಹೇಗೆ ಕಳೆದರೋ ಕಳೆದರು. ಅಂತೂ ಅವರು ಹುಬ್ಬಳ್ಳಿಗೆ ಬಂದ ಕೆಲಸ ಮುಗಿದು ಅವರು ಮೂರನೇ ದಿನದ ರಾತ್ರಿಯ ರೈಲಿಗೆ ಮರಳಿ ಶ್ರೀರಂಗಪಟ್ಟಣಕ್ಕೆ ಹೊರಟರು. ಮೂರನೆಯ ದಿನದ ಇಡೀ ಬೆಳಗು, ಹಗಲನ್ನೆಲ್ಲ ಅವರು ಕೆಲಸವಿಲ್ಲದೇ ಹುಬ್ಬಳ್ಳಿಯಲ್ಲಿ ಕಳೆಯಬೇಕಾಯಿತು. ಅಂದು ಬೆಳಿಗ್ಗೆ ರೈಲು ನಿಲ್ದಾಣದ ಎದುರು ಹಬ್ಬಿದ ಬೀದಿಯಲ್ಲಿ ಒಂದು ಸುತ್ತು ಸುತ್ತಿ ಬರುವೆನೆಂದು ನಡೆದರು. ಅವರು ಬೀದಿಯುದ್ದಕ್ಕೂ ಹಬ್ಬಿದ್ದ ಅಂಗಡಿ ಮುಗ್ಗಟ್ಟುಗಳನ್ನು ನೋಡುತ್ತ ಆ ಅಂಗಡಿಗಳ ಚಿತ್ರ ವಿಚಿತ್ರ ಹೆಸರಿನ ಬೋರ್ಡುಗಳನ್ನು ಓದುತ್ತ ನಡೆದರು. ಅದೇಕೋ ಒಂದು ಅಂಗಡಿಯ ಫಲಕ ಅವರ ಲಕ್ಷವನ್ನು ಸೆಳೆಯಿತು. ''ಶ್ರೀ ಸಿದ್ದೇಶ್ವರ ವೀರಶೈವ ಲಿಂಗಾಯತರ ಖಾನಾವಳಿ. ಪ್ರೋಪ್ರಾಯಿಟರ್ ಹಾಗೂ ಮಾಲೀಕರು, ಶ್ರೀ ಸಿದ್ಧಪ್ಪಾ, ಸಿದ್ಧಲಿಂಗಪ್ಪಾ ಸಿದ್ಧಗಿರಿಮಠ'' ಎಂಬ ಆ ನಾಮಫಲಕದಲ್ಲಿ ಎಷ್ಟು ಸಿದ್ಧರಿದ್ದಾರೆ ಎಂದುಕೊಳ್ಳುತ್ತ ಅವರು ನಗುತ್ತ ಕ್ಷಣ ಹೊತ್ತು ನಿಂತರು. ಆಗ ಬೆಳಗಿನ ಸುಮಾರು ಎಂಟು ಗಂಟೆಯಾಗಿರಬಹುದು. ವಿಚಿತ್ರವೆಂದರೆ ಹುಬ್ಬಳ್ಳಿಯಲ್ಲೂ ಎಳೆಬಿಸಿಲು ಹಿತವಾಗಿ ಮೋಹಕವಾಗಿ ಹರಡಿತ್ತು.

ಅವರು ನೋಡುತ್ತಿದ್ದಂತೆಯೇ ಖಾನಾವಳಿಯ ಒಳಗಿನಿಂದ ಸುಮಾರು ಮೂವತ್ತು ಮೂವತ್ತೈದರ ಒಳ ಹೊರಗಿನ ಒಬ್ಬ ಯುವಕ ಹೊರಗೆ ಬಂದ. ಯುವಕ ಧೋತಿ ಉಟ್ಟು ನೆಹರೂ ಜುಬ್ಬ ಧರಿಸಿ ತಲೆಯ ಮೇಲೊಂದು ರೊಟ್ಟಿನ ಕರೀ ಟೊಪ್ಪಿಗೆ, ಆ ಕಡೆಯ ಜನ ಸಾಮಾನ್ಯವಾಗಿ ಧರಿಸುವಂತಹದನ್ನೇ ಇಟ್ಟುಕೊಂಡಿದ್ದ. ಯುವಕ ಬೀದಿ ಬಾಗಿಲಿಗೆ ಹಾಲು ಹಾಕಿಸಿಕೊಳ್ಳಲೆಂದೋ ಅಥವಾ ಇನ್ನಾವುದಕ್ಕೋ ಬಂದಿದ್ದ. ಹಾಗಾಗಿ ವೆಂಕಟರಾಮಯ್ಯನವರು ಅವನನ್ನು ನಿಧಾನವಾಗಿ ನೋಡಲು ಸಾಧ್ಯವಾಯಿತು. ನೋಡತಾ ನೋಡತಾ ಅವರಿಗೆ ಇದ್ದಕ್ಕಿದ್ದಂತೆ ''ಅರೇ ಇವನು ನಮ್ಮ ಅಲಮೇಲು ಗಂಡ ರಂಗಸ್ವಾಮಿಯಂತಿದ್ದಾನಲ್ಲವೇ?'' ಎಂದು ತೋರಿತು. ಇನ್ನೊಂದು ಕ್ಷಣ ದಿಟ್ಟಿಸಿ ನೋಡುವಾಗ ಅವರ ಅನುಮಾನ ದೃಢಪಟ್ಟಂತಾಗಿ ಅವರು ನೇರವಾಗಿ ಯುವಕನ ಎದುರಿಗೆ ಸಾರಿ;

"ಏನಪ್ಪಾ, ನೀನು ನಮ್ಮ ಅಲಮೇಲು ಗಂಡ ರಂಗಸ್ವಾಮಿಯಲ್ಲವೇ?" ಎಂದು ಕೇಳಿಬಿಟ್ಟರು. ಯುವಕ ಈ ಅನಿರೀಕ್ಷಿತಕ್ಕೆ ಒಂದು ಕ್ಷಣ ತಬ್ಬಿಬ್ಬಾದ. ಅವನು ವೆಂಕಟರಾಮಯ್ಯನವರ ಮುಖವನ್ನು ನಿಟ್ಟಿಸುತ್ತಾ ಕೊಂಚ ವಿಚಲಿತನಾದಂತೆ ಕಂಡ. ನಂತರ ಏನೋ ಯೋಚಿಸಿ,

"ಯಾಂವರಿ ಅಂವ ರಂಗಸಾಮಿ ಅಂದರ, ನನಗೆ ಗೊತ್ತಿಲ್ಲ ತಗೀರಿ. ನನ್ನ ಹೆಸರು ರಂಗಪ್ಪ" ಎನ್ನುತ್ತ ಬಿರಬಿರನೆ ಒಳಗೆ ನಡೆದ.

ನಮ್ಮ ಮಾವನವರಿಗೆ ಸಂಶಯ ಇನ್ನೂ ಬಲವಾಯಿತು. ಅವರು ನೇರವಾಗಿ ಖಾನಾವಳಿಯ ಒಳಕ್ಕೇ ಹೋದರು, ಒಳಗಿನ ಮಬ್ಬು ಬೆಳಕಿಗೆ ಕಣ್ಣು ಹೊಂದಿಸಿಕೊಂಡರು. ಎದುರಿಗೆ ಚಿಕ್ಕ ಮೇಜಿಗೆ ಹೊಂದಿದ ಹಿಂದಿನ ಕುರ್ಚಿಯಲ್ಲಿ ಸುಮಾರು ಅರವತ್ತು ಅರವತ್ತೈದರ ಒಬ್ಬ ಹಿರಿಯ ಸ್ತ್ರೀ, ಯಜಮಾನ ಕಳೆಯವಳು ಕೂತಿದ್ದಳು. ಒಳಗಿನಿಂದ ಟಪ ಟಪ ರೊಟ್ಟಿ ಬಡಿಯುವ ಸದ್ದು ಕೇಳಿ ಬರುತ್ತಿತ್ತು. ಆ ಯುವಕ ಎಲ್ಲೂ ಕಾಣಲಿಲ್ಲ. ಆಗ ವೆಂಕಟರಾಮಯ್ಯನವರು ಯಜಮಾನಿಯನ್ನು ಕುರಿತು,

"ಅಮ್ಮಾ" ಎಂದರು.

ಆಗ ಏನಾಯಿತೋ ಏನೋ, ಇದ್ದಕ್ಕಿದ್ದಂತೆ ಆ ಯಜಮಾನಿ ಕೋಪದಲ್ಲಿ ದುರ್ಗೆಯ ರೂಪ ಧರಿಸಿ "ಯಾರಲಾ ಅವ ನನಗ 'ಅಮ್ಮಾ' ಅನ್ನಾವ... ಯಾಕೋ ಗಂಡಮಗನ, ಹ್ಯಾಂಗ ಕಾಣತೈತಿ?... ಸುದ್ದ ನಿಂಗಾಯಿತರ ಗರತಿ ಹೆಣಮಗಳ ನಾ... ಹಣೆತುಂಬ ಈಬತ್ತಿ ಬಳಕೊಂಡು ದೆವ್ವಸ್ಥಂಗ ಕುಂತೇನು... ತಲಿತುಂಬ ಕೂದಲದಾವು... ರೂಪಾಯಿದಗಲಕ್ಕ ಕುಂಕುಮಾ ಬಳದೇನು ದುರಗವ್ವಗ ದ್ಯಾಮವ್ವಗ ಬಳದಿರತಾರಲ್ಲ ಹಂಗ.... ಇಷ್ಟೆಲ್ಲ ಇದ್ದೂ ನಿನಗ ನಾ ಹಾರೂರ ರಂಡಿ ಮುಂಡಿ ಗತೆ ಕಾಣತೇನ?... ಕಣ್ಣೋ ಏನ ಪರಟಿ ತೂತ ಅದವೋ ನಿನ್ನುವು... ಅಮ್ಮ ಅಂತ ಅಮ್ಮ.... ಕೊಳ್ಳಾಗಿನ ಗುಳದಾಳಿ ಅರ ಕಾಣತೈತೋ ಇಲ್ಲೋ ಯಜಮಾನಾ... ಈಗ ನಮ್ಮ ಹಿರ್‍ಯಾ ಬಂದಾ ಅಂದ್ರ ನಿನ್ನ ಜಜ್ಜಿ ಹಿಂಡೀ ಮಾಡಿ ದನಕ್ಕೆ ಹಾಕ್ತಾನು... ಅಮ್ಮಂತ ಅಮ್ಮ... ಯಾವ ದೇಸದವನೋ ನೀನು... ಅದೇನು ಜುಟ್ಟಾ ಬಿಟ್ಟಿದೀ... ಅದಕ್ಕ ಹೆಣಮಕ್ಕಳ ಗತೆ ಅದೇನು ಗಂಟ ಹಾಕೀದಿ... ಮ್ಯಾಗ ನಾಲ್ಕು ದಿನದ್ದ ಬಿಳೀ ಗಡ್ಡ... ಇಷ್ಟುಽಽ ಸೋಂಗ ಸಾಕಾಗಲಿಲ್ಲಂತ ಮ್ಯಾಗ ಹುಬ್ಬಿನ ನಡಕ ಕುಂಕಮಾ ಬ್ಯಾರೆ ಹಚ್ಚೀದೀ... ಏನಿದ ಅವತಾರ ನಿಂದ.... ಜೋಗಪ್ಪ ಏನೋ ನೀ... ಜೋಗಪ್ಪ ಆಗಿದ್ದರ ಗುಡ್ಡಕ ಹೋಗು ಇಲ್ಲ್ಯಾಕ ಬಂದೀ... ನಮ್ಮಂತಹ ಗರತಿ ಹೆಣಮಗಳ ಇದ್ದಲ್ಲಿ

ನಾಕಮಂದಿ ಗತ ಮರ್ವಾದೆಯಿಂದ ಕಟ್ಟಿ ಬಿಗದ ಘ್ವಾತರಾ ಉಡಾಕ ಏನ ಬ್ಯಾನಿ ನಿನಗ?... ಅದೊಂದು ಬಿಳೇದು ಅರಿಬೀ ಅಡ್ಡಸುತಗೊಂಡು ಬಂದಾನ ಹಂಗ ಬಯಲಕಡೆ ಹೋಗಾವರಗತೆ...'' ಎನ್ನುತ್ತ ವೆಂಕಟರಾಮಯ್ಯನವರನ್ನು ಝಾಡಿಸತೊಡಗಿದಳು.

ಆಗ ಈ ಎಲ್ಲ ಗದ್ದಲ ಕೂಗಾಟಗಳನ್ನು ಕೇಳಿ ಒಳಗಿನಿಂದ ಆ ದುರ್ಗಿಯ ಗಂಡ ದುರ್ಗಪ್ಪ ಹೊರಗೆ ಬಂದು ನೇರವಾಗಿ ವೆಂಕಟರಾಮಯ್ಯನವರ ಎದುರಿಗೆ ಬಂದು ಅವರನ್ನು ಕೆಕ್ಕರಗಣ್ಣಿನಿಂದ ನಿಟ್ಟಿಸುತ್ತ, ''ಏನಿದ ನಿನ್ನ ಬಾನಗಡಿ... ಮುಂಝಾಲೆ ಹರ್‍ಯೊತ್ತಿನ್ಯಾಗ ಎದ್ದಕ್ಯಾಸ... ನಿನಗ ಮಾಡಾಕ ಏನ ಹ್ವಾರೇ ಇಲ್ಲೇನ?'' ಎಂದು ದರ್ಪದಲ್ಲಿ ಕೇಳಿದ.

ಈ ಎಲ್ಲ ಅನಿರೀಕ್ಷಿತ ಆಕ್ರಮಣಗಳಿಗೆ ಹೆದರಿ ವೆಂಕಟರಾಮಯ್ಯನವರು ಇನ್ನೇನು ತಿರುಗಿ ಹೊರಬಾಗಿಲಿನೆಡೆ ನಡೆಯಬೇಕು. ಅಷ್ಟರಲ್ಲಿ ಅವರಿಗೆ ಒಳಬಾಗಿಲಿಗೆ ಆತುಕೊಂಡು ಅದೇ ಯುವಕ ತಮ್ಮನ್ನೇ ನೋಡುತ್ತ ನಿಂತಿದ್ದುದು ಕಂಡಿತು.

ಆಗ ಅವರು ಅಳಿದುಳಿದ ಧೈರ್ಯವನ್ನೆಲ್ಲ ಒಟ್ಟುಗೂಡಿಸಿ ಆ ಯುವಕನಿಗೆ ''ಏನಪ್ಪಾ ರಂಗ್ಸಾಮಿ ನೀನು ಮಾಡಿದ್ದು ಸರಿಯೇ? ಏನೋ ಒಂದು ಸಣ್ಣ ಮಾತಿಗೆ ಇಷ್ಟೊಂದು ರಂಪ ಮಾಡುತ್ತಾರೇನಪ್ಪ?... ನೀನು ಹೀಗೆ ಬಂದುಬಿಟ್ಟರೆ ಪಾಪ ಆ ಅರಿಯದ ಹುಡುಗಿ ಏನು ಮಾಡಬೇಕಪ್ಪ... ಪಾಪ ನೀನು ಹೊರಟು ಬಂದ ರಾತ್ರಿ ಅಲಮೇಲು ನಿನಗಾಗಿ ಸುಚ್ಚಿನುಂಡೆ ಬೆಂಡೆಹುಳಿ ಮಾಡಿಕೊಂಡು ಎಷ್ಟೊಂದು ಕಾಯ್ದಳಪ್ಪಾ...'' ಎಂದರು ಅನುನಯದಲ್ಲಿ.

ಸುಚ್ಚಿನುಂಡೆ ಬೆಂಡೆಹುಳಿಗಳ ಪ್ರಸ್ತಾಪ ಬರುತ್ತಲೂ ಯುವಕ ಕರಗಿ ನೀರು ನೀರಾದ. ಆತ ಏನೆಲ್ಲ ಭಾವನೆಗಳ ತುಮುಲಕ್ಕೆ ಒಳಗಾಗಿ ಓಡೋಡಿ ಬಂದು ವೆಂಕಟರಾಮಯ್ಯನವರ ಪಾದಕ್ಕೆ ಬಿದ್ದು ಗಟ್ಟಿಯಾಗಿ ರೋದಿಸತೊಡಗಿದ, ದುಃಖದ ಆವೇಗ ಕಡಿಮೆಯಾದ ಮೇಲೆ ವೆಂಕಟರಾಮಯ್ಯನವರೂ ನಿಜದಲ್ಲಿ ರಂಗ್ಸಾಮಿಯೇ ಆಗಿದ್ದ ಆ ಯುವಕನೂ ಏನೇನೋ ಮಾತಾಡಿಕೊಳ್ಳತೊಡಗಿದರು. ಊರಿನ ಬಗ್ಗೆ ಮನೆಯ ಬಗ್ಗೆ ಅಲಮೇಲುವಿನ ಬಗ್ಗೆ ಅವರು ಬಿಟ್ಟೂ ಬಿಡದೆ ತೋಡಿಕೊಳ್ಳತೊಡಗಿದರು.

ನೋಡೂ ಮಟನೋಡಿ ಮುದುಕಿ ರಂಗ್ಸಾಮಿಯ ರಟ್ಟೆಹಿಡಿದು ತನ್ನೆಡೆಗೆ ಎಳೆದುಕೊಂಡು, ''ಏ ರಂಗಪ್ಪ... ಏನಿದ ರಾಡಿ... ಈ ಮನಿಶ್ಯಾ ಯಾರು... ಏನ ಕತಿ... ಈ ಜೋಗಪ್ಪ ಬಂದು ಯಾಡ್ಡ ಮಿನೀಟ ಆಗಿಲ್ಲ ನೀ ಆಗಳೇ ಅವಗ

ಾಮೇಲ ಆಗಿ ಅವನಗತೀನ ಅದೇನು ತೆಲಗೋ ತಮಿಳೋ ಅರೇವ ಬಾಸಾದಾಗ ಮಾತಾಡಾಕ ಪತ್ತೀಯಲ್ಲಾ...'' ಎಂದು ಝುಬರಿಸಿದಳು. ಆಗ ರಂಗ್ಸಾಮಿ ''ಯವ್ವಾ.. ಯವ್ವಾಬೇ ಯಲ್ಲಾ ಹೇಳತೇನು.. ಒಂದ್ನಿಮಿಟ ಉಸರ ಹಿಡಿ'' ಎಂದು ತನ್ನ ಕತೆಯನ್ನೆಲ್ಲ ಸವಿಸ್ತರವಾಗಿ ಹೇಳಿ ''ಹುಬ್ಬಳ್ಳಿಗೆ ನಿಮ್ಮ ಕಡೆ ಬರೂಕಿಂತಾ ಮುಂಚೇಕ ಆರ ತಿಂಗಳ ರಾಣಿಬೆನ್ನೂರಾಗ 'ಬಾಡಸಿದ್ಧೇಸ್ವರ' ಕಾನಾವಳ್ಯಾಗ ಕೆಲಸಾ ಮಾಡಿ ನಿಮ್ಮ ಗತೇನ ಸುದ್ದ ಖನ್ನಡ ಮಾತಾಡಾಕ ಕಲಕೊಂಡಿದ್ದಿನಿ'' ಎಂದು ಮುಗಿಸಿದ. ಆಗ ಮುದುಕಿ ಹತಾಶ ಕೋಪದಲ್ಲಿ ನಿರಾಶೆ ತುಂಬಿದ ನೋವಿನಲ್ಲಿ, ''ಅಂದರಽಽ... ನೀ ಆ ಕಡೆ ಮೈಸೂರ ಮದ್ರಾಸ ಕಡಿ ಹಾರೂರಾವ ಅಂಥಂಗಾತಲ್ಲ... ಅಯ್ಯ ಶಿವನಽಽ ಹಾದಿಲೇ ಹೋಗೋ ದೆವ್ವಾ ಮನ್ಯಾಗ ಹೊಗಿಸಿಗೊಂಡಾಗ ಆತಲ್ಲೋ... ಮಕ್ಕಳಿಲ್ಲದ ಮುದುಕಿ ನಾ ಮಗನ ಗತೆ ನಿನ್ನ ಸಾಕಿದಿನಲ್ಲೊ, ಹತ್ತು ಹನ್ನೆರಡ ವರಸ...'' ಎಂದು ಆಕ್ರೋಶಿಸುತ್ತ, ದುಃಖಿಸುತ್ತ ''ಹಂ.. ಇನ್ನ ಹೇಣ್ತಿ ಕಡೆ ಹೋಗಾವಲ್ಲ ನೀ... ಹೊರಡು ಹಂಗಾರ ಒಟ್ಟಽ ನನ್ನ ನಶೀಬನಽ ಖೊಟ್ಟಿ...'' ಎನ್ನುತ್ತ ತನ್ನ ಕಣ್ಣೀರಿನ ಮುಖವನ್ನು ಆಚೆಕಡೆ ತಿರುಗಿಸಿದಳು. ಆಗ ರಂಗ್ಸಾಮಿ ಉರೂಫ್ ರಂಗಪ್ಪ ಮುದುಕಿಯನ್ನು ತಬ್ಬಿಕೊಂಡು ''ಯವ್ವಾ... ನೀ ಕಣ್ಣೀರ ಹಾಕಬ್ಯಾಡಬೇ... ನೀ ಹೋಗಬ್ಯಾಡ ಅಂದರ ನಾ ಹೋಗಾಕಿಲ್ಲ ಬೇ.. ಹನ್ನೆರಡು ವರಸಾತು ನಿನ್ನ ಮಗನಕಿಂತ ಹೆಚ್ಚಾಗಿ ನೋಡಿಕೊಂಡೀ ನನ್ನ... ನನಗ ಆ ಊರೂ.... ಹ್ಯಾಂತೀ.. ಮನೀ ಮಠ ಯಾವದೂ ಬ್ಯಾಡ.... ಇಲ್ಲೇ ನಿಮ್ಮಿಬ್ಬರ ಕುಟ್ಟ ಹಿಂಗಽ ಇದ್ದಬಿಡತೇನು'' ಎಂದು ಅಳತೊಡಗಿದ.

ಆಗ ವೆಂಕಟರಾಮಯ್ಯನವರು ''ನಾವು ಅನಾಗರಿಕರೆಂದು ತಿಳಿದುಕೊಂಡ ಈ ಸೀಮೆಯ ಜನರಲ್ಲೂ ಎಷ್ಟೊಂದು ಹೃದಯವಂತಿಕೆ ತುಂಬಿಕೊಂಡಿರುತ್ತದಲ್ಲಾ'' ಎಂದು ಆಶ್ಚರ್ಯ ಚಕಿತರಾಗುತ್ತ ಮೇಲಕ್ಕೆತ್ತಿ ಕಟ್ಟಿದ್ದ ಪಂಚೆಯನ್ನು ಸಡಿಲಿಸಿ ಕೆಳಕ್ಕೆ ಬಿಟ್ಟರು.

ಹೀಗೇ ಎಷ್ಟೋ ಸಮಯ ಮುದುಕಿ ಹಾಗೂ ರಂಗಪ್ಪಸಾಮಿ ತಬ್ಬಿಕೊಂಡು ದುಃಖಿಸುತ್ತಿರಬೇಕಾದರೆ, ಮುದುಕಪ್ಪ ಮಧ್ಯೆ ಪ್ರವೇಶಿಸಿ ಅವರಿಬ್ಬರನ್ನು ಬೇರ್ಪಡಿಸಿ, ಮುದುಕಿಯನ್ನು ಸಂತೈಸುತ್ತ ಹೇಳಿದ ''ನೋಡ... ಅವನ ಲಗ್ಗಣ ಆಗೇತಿ ಅಂತ ಹೇಳತಾನು.... ಊರಾಗ ಹೇಣ್ತಿ ಅದಾಳಂತಽ... ಏನ ಕಾಡುಕಾಲ ಬಂದಿತ್ತೋ ಏನೋ ಇಷ್ಟ ದಿವಸ ಗಂಡಾ ಹ್ಯಾಣ್ತಿ ಬ್ಯಾರೆ ಬ್ಯಾರೆ ಆಗೋ ಹೊತ್ತು ಬಂದಿತ್ತು. ಇನ್ನ ಹೋಗಲಿ ಬಿಡು... ಏನ ರಿಣ ತಿಂದಿದ್ದನೋ ಏನೋ ಇಷ್ಟ ವರಷ ಮಗನಗತೇನಽ ಇದ್ದ... ಅಲ್ಲಿ ಹೇಣ್ತೆನ್ನ ಬಿಟಕೊಟ್ಟು ಇಲ್ಲಿ ನಮ್ಮ ಕುಟ್ಟ

ಹೀಂಗ ಇರೋದು ಶಿವನ ಮನಸ್ನಾಗ ಬಂದಿರಲಿಕ್ಕಿಲ್ಲ... ಅದಕ್ಕಂತSS ಇವತ್ತ ಈ ಜೋಗಪ್ಪನ್ನ ಕಳಸ್ಯಾನ ಕರಕೊಂಡು ಹೋಗಾಕ ಅಂತ... ಹೋಗಲಿ ಬಿಡು'' ಎಂದು ರಂಗಪ್ಪನ ಕಡೆ ತಿರುಗಿ ''ಹೋಗಿ ಬಾ ಮಗಾ... ಹಾಂಗ ಲಗ್ಗಣದ ಹ್ಯಾಂತಿನ್ನ ಬಿಟ್ಟ ಬರೂದು ಜವಾಬ್ದಾರಿ ಮಂದಿ ಮಾಡೂ ಕೆಲಸ ಅಲ್ಲ... ಅಷ್ಟಲ್ಲದS ನೀ ಅರ ಏನ ಉಪ್ಪಂಡ ಮನಿಶಾ... ಅಲ್ಲಿ ಊರಾಗ ಲಗ್ಗಣದ ಹೇಣ್ತಿನ್ನ ಬಿಟ್ಟು ಇಲ್ಲಿ ದಿನಾ ಮಧ್ಯಾಣದಾಗ ಹುಬ್ಬಳ್ಳಿ ಸ್ಟ್ಯಾಂಡ ಮ್ಯಾಗ ನಿಂತಕೊಂಡ ಯಲ್ಲಮ್ಮನ ಗುಡ್ಡಕ ಹೋಗೋ ಸೂಳ್ಯಾರನ್ನ ನೋಡಿಕೊಂತ ನಿಂವರತಿದ್ದೀ... ಅದೇನ ಛಂದ ಹೇಳ... ಒಮ್ಮೆ ಲಗ್ಗಣಾ ಅಂತ ಆದ ಮ್ಯಾಗ ಬಿಡಿಸಿಕೊಳ್ಳಾಕ ಬರೂದುಲ್ಲ... ಹೋಗಿಬಾ... ಹಂಗೇನಾರS ಮತ್ತ ಭಾಳ ತ್ರಾಸ ಆದರ ಈ ಸರೇ ನೋಡಚೀಟಿ ಕೊಟ್ಟ ಬಂದಬಿಡು'' ಎಂದು ರಂಗಪ್ಪಸಾಮಿಯನ್ನು ಸಂತೈಸಿದ.

ಅಂದು ಸಂಜೆ ಮುದಕಪ್ಪನೂ ಮುದಕವ್ವನೂ ಸಿದ್ದಗಿರಿ ಮಠ ಖಾನಾವಳಿಯ ನಾಲ್ಕಾರು ಕೆಲಸದ ಹುಡುಗರೂ ರೈಲು ನಿಲ್ದಾಣಕ್ಕೆ ಬಂದು ರಂಗಪ್ಪನನ್ನೂ ಜೋಗಪ್ಪನನ್ನೂ ಬೀಳ್ಕೊಟ್ಟರು.

ಮುದುಕಿ ರಂಗಪ್ಪನ ಹೆಂಡತಿಗೆ ಒಂದು ನೇಯಿಗೀದು ಹಸರ ಬಣ್ಣದ್ದು ಇಳಕಲ್ಲ ಸೀರಿ, ರಬಕವಿ ಕಣ, ಒಂದು ಬೆಳ್ಳಿ ತಂತಿಯೊಳಗ ಪೋಣಿಸಿದ್ದ ಮುತ್ತಿನ ಬೆಂಡೋಲಿ ಜೋಡು; ರಂಗಪ್ಪಗ ಎರಡು ಯಮ್ಮಿಗನೂರ ಅಂಚಿನ ಧ್ವಾತರಾ, ಮಾಂಜರಪಾಟದ್ದ ಎರಡು ಜುಬ್ಬಾ, ಒಂದು ಹೊಚ್ಚ ಹೊಸಾ ಕೋರಾ ಕರೇ ಟೊಪಿಗೆ ಕೊಟ್ಟಳು. ಇನ್ನೊಂದು ಬಿದರಿನ ಬುಟ್ಟಿ ತುಂಬ ನಾಲ್ಕು ದಿನಕ್ಕ ಆಗೋ ಅಟ ಶೆಜ್ಜಿ ರೊಟ್ಟಿ, ಯಣಗಾಯಿ ಪಲ್ಲ್ಯಾ, ಗುರೆಳ್ಳಪುಡಿ, ಕಾರಬ್ಯಾಳಿ, ಬೆಳ್ಳುಳ್ಳಿ ಚಟ್ನಿಪುಡಿ, ಕ್ವಾಟೂರ ಬೆಣ್ಣೆ, ಬೈರಿಕೊಪ್ಪದ ಗಡಿಗ ಮೊಸರು, ಯಲ್ಲಾ ತುಂಬಿ ತುಂಬಿಸಿ, ಇನ್ನೊಂದು ಆಲೀ ಮನೀ ಡಬ್ಬೀ ತುಂಬ ಮಾಲೇದಿ ಉಂಡಿ ತುಪ್ಪದ ಬಾಟ್ಲಿ ಯಲ್ಲಾ ಕೊಟ್ಟು, ''ನಿಮ್ಮೂರಿಗೆ ಹೋಗಿ ಮುಟ್ಟಾಕ ಎರಡ ಮೂರು ದಿವ್ಸಾರ ಬೇಕಾಗತೇತಿ ಅಂತ ಕೇಳೇನಿ... ನಡ ಬರಕ ದಾರ್‍ಯಾಗ ಹೊರಗಿಂದು ಏನೂ ತಿನಬ್ಯಾಡಾ... ಜ್ವಾಕಿಂದ ಹೋಗಿಬಾ... ಜ್ವಾಕಿಂದ ಇರು... ನಿನ್ನ ಕೆಮ್ಮಿಗೆ ಛೊಲೋ ಅಗಸುದ್ದೆ ತಗೊ.. ಒಮ್ಮೆ ಹ್ಯಾಂತಿನ್ನ ಕರಕೊಂಡು ಬಾ, ರೊಟ್ಟಿ ಬಡಿಯೋದ ಕಲಸತೇನು... ಆ ಕಡಿ ಹೆಣಮಕ್ಕಳು ಬಲು ಸೋಮಾರಿಗಳಂತ ಕೇಳೇನೀ..... ಕೆಲಸಾನSS ಮಾಡೂದುಲ್ಲಂತ... ಬರೇ ಅಣ್ಣ ಅಣ್ಣ ಅಣ್ಣ ಮೂರು ಹೊತ್ತೂ ಅಣ್ಣನSS ಉಣತಾವಂತS... ಆಮ್ಯಾಗ ಬರೇ ಆ... ಊ....

ಅನಕೋತ ಪದಾ ಹಾಡಿಕೊಂತ ಕುಂತಜಿಡತಾವಂತSS... ಮತ್ತಿನ್ನSS ಗಂಡಸೂರು ಓಡಿಹೋಗದ ಏನ ಮಾಡ್ಯಾರು ಪಾಪ...'' ಎಂದು ರಂಗಪ್ಪನಿಗೆ ವಿದಾಯ ಹೇಳುತ್ತಿದ್ದಳು. ಮುದುಕಪ್ಪ ಪಾಪ ದೂರ ನಿಂತು ಕೆಮ್ಮಿ ಕೆಮ್ಮಿ ಬೀಡಿ ಸೇದುತ್ತ ಒದ್ದೀ ಕಣ್ಣುಗಳಿಂದ ರಂಗಪ್ಪನನ್ನೇ ನೋಡುತ್ತ ನಿಂತಿದ್ದ. ಇನ್ನೇನು ರೈಲು ಹೊರಡುತ್ತದೆನ್ನುವಾಗ ಮುದುಕಿ ಮತ್ತೆ ನಡುಗು ದನಿಯಲ್ಲಿ ರಂಗಪ್ಪನ ಕೈ ಗಟ್ಟಿಯಾಗಿ ಹಿಡಿದುಕೊಂಡು ''ಜ್ವಾಕಿಂದ ಹೋಗಿ ಬಾ... ನಿನ್ನ ಬೇತನ್ಯಾಗ ನೀ ಇರೋದು ಕಲಿ... ಆ ಕಡಿ ಮಂದಿ ಬರೇ ಬಣ್ಣದ ಮಾತಾಡಿ ಕೂದಲೆಳೆಯಿಂದ ಕುತಿಗೆ ಕೊಯ್ತಾರ ಅಂತ ಕೇಳೇನಿ... ಹಂತವರ ನಡಕ ಹ್ಯಾಂಗ ಬದುಕತ್ಯೆತೋ.... ಇದರS ಭೋಳೇಋೋಡಿ...'' ಎನ್ನುತ್ತ ಸೆರಗಿನಲ್ಲಿ ಮುಖ ಮುಚ್ಚಿದಳು.

ರೈಲು ಚಲಿಸಿತು. ವೆಂಕಟರಾಮಯ್ಯನವರು ರಂಗ್ಸಾಮಿಯ ಜತೆಗೆ ಶ್ರೀರಂಗಪಟ್ಟಣಕ್ಕೆ ಹೊರಟರು.

ರಾತ್ರಿ ರೈಲಿನಲ್ಲಿ ರಂಗ್ಸಾಮಿ ಊಟದ ಸಮಯಕ್ಕೆ ಸಿದ್ದೇಶ್ವರದ ಊಟದ ಗಂಟು ಬಿಚ್ಚಿ ಸಂತೋಷದಿಂದ ಊಟಕ್ಕೆ ತೊಡಗಿದ. ರೈಲು ಡಬ್ಬಿಯ ತುಂಬ ಖಮ್ಮೆಂದು ತಿಂಡಿಯ ಸುವಾಸನೆ ಪಸರಿಸಿತು. ರಂಗ್ಸಾಮಿ ಎಷ್ಟೇ ಆಗ್ರಹಪಡಿಸಿದರೂ ವೆಂಕಟರಾಮಯ್ಯನವರು ಊಟ ಮಾಡಲಿಲ್ಲ. ಏನೋ ಉಪವಾಸ ವ್ರತವೆಂದರು. ನಂಜನಗೂಡಿನ ಕೊನೆಯ ಬಾಳೇ ಹಣ್ಣೂ ಮುಗಿದಿತ್ತು! ರಂಗ್ಸಾಮಿ ಒಂದೊಂದೇ ಒಂದೊಂದೇ ತಿಂಡಿಯ ಗಂಟನ್ನು ಬಿಚ್ಚುತ್ತ ನಡೆದಂತೆ ಕಂಪಾರ್ಟಮೆಂಟಿನ ತುಂಬೆಲ್ಲ ಹೊಸ ಹೊಸ ಕಂಪು ಪಸರಿಸುತ್ತಿತ್ತು. ಆಗ ವೆಂಕಟರಾಮಯ್ಯನವರು ರಂಗ್ಸಾಮಿಯ ಎದುರಿನ ಬಾಕಿನ ಮೇಲೆ ಪದ್ಮಾಸನ ಹಾಕಿ ಕೂತು ಕಣ್ಣು ಮುಚ್ಚಿ ಮೂಗನ್ನೂ ಮುಚ್ಚಿ ರಾಮರಕ್ಷಾಸ್ತೋತ್ರ ಪಠಿಸತೊಡಗಿದರು. ಆಮೇಲೆ ಹನುಮಾನ್ ಚಾಲಿಸಾ ಪಠಿಸಿದರು... ಆಮೇಲೆ ದುರ್ಗಾಸ್ತೋತ್ರ... ಆಮೇಲೆ ಲಲಿತಾ ಸಹಸ್ರನಾಮ... ವಿಷ್ಣು ಸಹಸ್ರನಾಮ... ಆದಿತ್ಯ ಹೃದಯ... ಆಮೇಲೆ...

ಹೀಗೆ ಅರಸೀಕೆರೆ ಬರುವವರೆಗೆ, ಹುಬ್ಬಳ್ಳಿಯ ತಿಂಡಿಯ ಕಂಪು ಹವೆಯಲ್ಲಿ ಕರಗಿ ನೀಲಾಗಸದಲ್ಲಿ ವಿಲೀನವಾಗಿ ಹೋಗುವವರೆಗೆ, ನಮ್ಮ ಮಾವ ವೆಂಕಟರಾಮಯ್ಯನವರ ನಾಲಗೆಯ ಮೇಲೆ ಭಕ್ತಿ ಪುರಸ್ಸರವಾದ ದ್ರವರೂಪೀ ಭಗವನ್ನಾಮಾಮೃತ ಹರಿದೂ ಹರಿದೂ ಅವರ ಉತ್ತರೀಯವನ್ನೆಲ್ಲ ತೋಯಿಸಿಬಿಟ್ಟಿತ್ತು. ಇರಲಿ.

★★★

ಅರಸಿಕೆರೆಯಲ್ಲಿ ರೈಲು ಬದಲಿಸಿ ಮೂರನೇ ದಿನ ಇವರು ಶ್ರೀರಂಗಪಟ್ಟಣ ತಲುಪಿದಾಗ ಸಂಜೆಯಾಗಿತ್ತು. ಅವರು ನೇರವಾಗಿ ವೆಂಕಟರಾಮಯ್ಯನವರ ಮನೆಗೇ ಹೋದರು. ಗಂಡ ಹೆಂಡತಿ ಅಗಲಿ ಹನ್ನೆರಡು ವರುಷವಾಗಿತ್ತು. ಹಾಗಾಗಿ ಅವರ ಮೊದಲ ಭೇಟಿಗೆ ಮರುದಿನ ಬೆಳಿಗ್ಗೆ ರಾಹುಕಾಲ ಕಳೆದು ಶ್ರೀ ರಂಗನಾಥಸ್ವಾಮಿಯ ದೇವಸ್ಥಾನದಲ್ಲಿ ಏರ್ಪಾಟು ಮಾಡಬೇಕಿತ್ತು. ಅಂದೇ ರಾತ್ರಿ, ಬೀದಿಯ ಕೆಲವು ಹಿರಿಯ ಮುತ್ತೈದೆಯರು ಅಲಮೇಲುವಿನ ಬಳಿ ಹೋಗಿ ಸುವಾರ್ತೆಯನ್ನು ಮುಟ್ಟಿಸಿ, ಮರುದಿನದ ಸಿದ್ಧತೆಗಳಿಗೆ ನೆರವಾಗಲೆಂದು ಅಲಮೇಲು ಮನೆಯಲ್ಲೇ ನಿಂತರು. ಇತ್ತ ಹನ್ನೆರಡು ವರುಷಗಳಿಂದ ಅಜ್ಞಾತವಾಸದಲ್ಲಿ ರಂಗಪ್ಪನಾಗಿ ಬಾಳಿದವನನ್ನು ಮತ್ತೆ ರಂಗಸ್ವಾಮಿಯನ್ನಾಗಿಸುವ ಹರಸಾಹಸವನ್ನು ಅಕ್ಷರಶಃ ಜುಟ್ಟು ಜನಿವಾರಗಳಿಂದಲೇ ಪ್ರಾರಂಭಿಸಬೇಕಿತ್ತು.

ವೆಂಕಟರಾಮಯ್ಯನವರು ಹಿರಿಯರು ಅನುಭವಿಗಳು ಶಾಸ್ತ್ರ ಬಲ್ಲವರು. ಅವರು ಇನ್ನಿಲ್ಲದ ಮುತುವರ್ಜಿ ವಹಿಸಿ, ಪ್ರಯಾಣದ ಆಯಾಸವನ್ನು ಲೆಕ್ಕಿಸದೇ ಆ ರಾತ್ರಿ ಮಧ್ಯರಾತ್ರಿಗೂ ಮೀರಿ ದುಡಿದು ಆ ಕೆಲಸಗಳನ್ನೆಲ್ಲ ಪೂರೈಸಿದರು.

ಇತ್ತ ರಾತ್ರಿಯಿಡೀ ಅಲಮೇಲುವಿಗೆ ನಿದ್ದೆಯಿಲ್ಲ. ಗಂಡ ಮರಳಿ ಬಂದ ಸಂತಸ ಒಂದು ಕಡೆ, ಇಷ್ಟು ದಿನ ಗಂಡನನ್ನಗಲಿದ ನೋವು, ಅಪಮಾನ, ಯಾತನೆ ಇನ್ನೊಂದೆಡೆ. ಇನ್ನು ಮುಂದೆ ಮತ್ತೆ ಸುಖದ ಬಾಳಿನ ಕನಸು; ಅದೇ ಕಾಲಕ್ಕೆ ಇನ್ನು ಮುಂದೆ ಗಳಗನಾಥರಿಗೆ ತಲೆಸ್ನಾನಕ್ಕೆ ದೇವರ ನಾಮಗಳಿಗೆ ಭಂಗ ಬಂದೀತೇನೋ, ಎಂಬ ಹೆದರಿಕೆ. ಇದೆಲ್ಲ ಈಗ ಬೇಕಿತ್ತೇ ಎಂಬ ಅನಿಸಿಕೆ. ಮತ್ತೆ ಲಿಂಬೇ ಹಣ್ಣು, ಮೆಟ್ಟು, ಪ್ರಪಂಚಕ್ಕೆ ಮರಳಬೇಕಾದೀತೇನೋ ಎಂಬ ಆತಂಕ. ಈ ರೀತಿ ಅಲಮೇಲು ಮಿಶ್ರಭಾವನೆಗಳಿಗೆ ತುತ್ತಾಗಿ ಮಗ್ಗಲು ಬದಲಾಯಿಸುತ್ತಿದ್ದಳು. ಹೀಗೆ ಬೆಳಗಿನ ಜಾವದ ವರೆಗೆ ಯೋಚಿಸಿ, ಚಿಂತಿಸಿ, ಅಳೆದೂ ಸುರಿದೂ ಕೊನೆಗೂ ಅಲಮೇಲು ಒಂದು ನಿರ್ಧಾರಕ್ಕೆ ಬಂದಳು.

ಮರುದಿನ ಶ್ರೀರಂಗಪಟ್ಟಣದ ದೇವಸ್ಥಾನ ಬೀದಿಯಲ್ಲೆಲ್ಲ ಸುದ್ದಿಯೋ ಸುದ್ದಿ, ಸಂಭ್ರಮವೋ ಸಂಭ್ರಮ, ಸಂತಸವೋ ಸಂತಸ! ರಂಗಪ್ಪನನ್ನು ಜುಟ್ಟು ಜನಿವಾರ ಪಟ್ಟೆ ಪೀತಾಂಬರಗಳಿಂದ ಸಿಂಗರಿಸಿ, ಅವನ ಬಾಯಿಗೆ ಕಡಾಯಿ ಪಂಚಗವ್ಯ ಸುರಿದು ಶುದ್ಧೀಕರಿಸಿ ಮತ್ತೆ ರಂಗಸ್ವಾಮಿಯನ್ನಾಗಿ ಪರಿವರ್ತಿಸಿದ್ದರು. ಗಂಡ ಹೆಂಡತಿ ಶ್ರೀರಂಗನ ಸನ್ನಿಧಿಯಲ್ಲಿ ಒಬ್ಬರನ್ನೊಬ್ಬರು ಎಣ್ಣೆಯಲ್ಲಿ ನೋಡಿ ಉದ್ವೇಗ ತಾಳಲಾರದೇ ಕಣ್ಣೀರು ಸುರಿಸಿದರು. ಪುಣ್ಯಾ ಹವಾಚನವಾಯಿತು. ಪಾನಕ ಕೋಸಂಬರಿಗಳ ವಿತರಣೆಯಾಯಿತು. ಕೆಲವು ಹಿರಿಯರು ದಂಪತಿಗಳಿಗೆ

ಹೊಸ ಬಟ್ಟೆ ಓದಿಸಿದರು. ಮಹಾ ಮಂಗಳಾರತಿಯ ನಂತರ ಎಲ್ಲರಿಗೂ ದೇವಸ್ಥಾನದಲ್ಲಿಯೇ ಪೊಂಗಲ್ಲು ಪುಳಿಯೋಗರೆಗಳ ಸಮಾರಾಧನೆಯಾಯಿತು. ಆಮೇಲೆ ವಾಲಗ ನಾದಸ್ವರಗಳ ಮುನ್ನಡೆಯಲ್ಲಿ ಒಂದು ಪುಟ್ಟ ಮೆರವಣಿಗೆಯಲ್ಲಿ ಜ್ಞಾತಿ ಬಾಂಧವರೆಲ್ಲ ರಂಗ್ಸಾಮಿಯ ಮನೆಗೆ ಬಂದರು. ಮನೆಯನ್ನೆಲ್ಲ ತಳಿರು ತೋರಣಗಳಿಂದ ಅಲಂಕರಿಸಿದ್ದರು. ಮನೆಯ ಮುಂದೆ ದಂಪತಿಗಳನ್ನು ನಿಲ್ಲಿಸಿ ಹಿರಿಯ ಮುತ್ತೈದೆಯರು ಆರತಿ ಎತ್ತಿ ಹಸೆ ಹಾಡು ಹೇಳಿದರು. ಆಮೇಲೆ ಹಿರಿಯರೆಲ್ಲ ಗಂಡ ಹೆಂಡತಿಯನ್ನು ಬಾಯಿತುಂಬ ಹರಸಿದರು. ಹೆಣ್ಣು ಮಕ್ಕಳೆಲ್ಲ ಏನೇನೋ ದಾಂಪತ್ಯ ಜೀವನದ ತುಂಟ ನಗೆ ಮಾತುಗಳನ್ನು ಹೇಳಿ ರಂಜಿಸಿ ಅವರ ಏಕಾಂತಕ್ಕೆ ಅನುಕೂಲ ಮಾಡಿಕೊಟ್ಟು ತಮ್ಮ ತಮ್ಮ ಮನೆಗಳಿಗೆ ತೆರಳಿದರು.

ಇದನ್ನೇ ಕಾಯುತ್ತ ಹಸಿದು ಕಂಗಾಲಾಗಿದ್ದ ದಂಪತಿಗಳು ಒಬ್ಬರನ್ನೊಬ್ಬರು ನೋಡಿ ಅರ್ಥಗರ್ಭಿತವಾಗಿ ಮುಗುಳುನಕ್ಕರು.

ಅಲಮೇಲು ಸೊಂಟದಿಂದ ಬೀಗದ ಕೈ ತೆಗೆದು ಬೀದೀ ಬಾಗಿಲು ತೆರೆದು ದೂಡಿ ಲಜ್ಜೆಯಿಂದ ಕೆಂಪು ಕೆಂಪಾಗುತ್ತ ನತಶಿರಳಾಗಿ ಬಾಗಿಲಿಗೇ ನಿಂತಳು ರಂಗ್ಸಾಮಿ ಅವಳನ್ನು ಹಿಂದಿಟ್ಟುಕೊಂಡು ತೊಟ್ಟಿಯಲ್ಲಿ ಮೆಟ್ಟುಬಿಡಲು ನಡೆದ.

ಆದರೆ ಅಕಟಾ! ಅಲ್ಲಿ ರಂಗ್ಸಾಮಿಯ ನಾಲ್ಕಾರು ಜತೆ ಹಳೆಯ ಷೂಸುಗಳೂ ಚಪ್ಪಲಿಗಳೂ ಗಂಡ ಭೇರುಂಡಗಳಾಗಿ ಒಪ್ಪವಾಗಿ ಗೋಡೆಗೊರಗಿ ಪಿಳಿ ಪಿಳಿ ಕಣ್ಣು ಬಿಡುತ್ತ ರಂಗ್ಸಾಮಿಯನ್ನು ಅಣಗಿಸುತ್ತ ಲೇವಡಿ ಮಾಡುತ್ತ ನಿಂತಿದ್ದವು.

ರಂಗ್ಸಾಮಿ ಒಂದು ಕ್ಷಣ ದಿಗ್ಭ್ರಮೆಗೊಂಡು ಅಲಮೇಲುವಿನ ಕಡೆಗೆ ಹೊರಳಿ ನೋಡಿದ. ಅವಳು 'ಏನು ಮಹಾ' ಎಂಬಂತೆ ರಂಗ್ಸಾಮಿಯ ಕಡೆ ನೋಡಿ ಮೋಹಕವಾಗಿ ಮುಗುಳು ನಕ್ಕಳು. ಆ ಕ್ಷಣಕ್ಕೆ ಆ ಮುಗುದೆ ರಂಗ್ಸಾಮಿಗೆ ಇನ್ನಿಲ್ಲದ ಚೆಲುವೆಯಾಗಿ ಕಂಡಳು.

ರಂಗ್ಸಾಮಿ ಇನ್ನೊಮ್ಮೆ ಮೆಟ್ಟುಗಳ ಕಡೆ ಹೊರಳಿ "ಥೂ! ಅನಿಷ್ಟ ಮುಂಡೇವೇ ಇಷ್ಟೆಲ್ಲ ನಿಮ್ಮಿಂದಲೇ ಆದದ್ದು" ಎಂದು ಪುಟ ಪುಟಿಸುತ್ತ, ಸಿಟ್ಟಿನಿಂದ ಮೆಟ್ಟುಗಳನ್ನೆತ್ತಿ ಬೀದಿ ಬಾಗಿಲಿನಿಂದ ದೂರ ಬಿಸಾಕಿ ಎರಡೂ ತೋಳುಗಳಿಂದ ಅಲಮೇಲುವನ್ನು ತಬ್ಬಿ ಒಳಗೆಳೆದುಕೊಳ್ಳುತ್ತ, ಬೀದಿ ಬಾಗಿಲನ್ನು ಕಾಲಿನಿಂದ ಘಟಾರನೇ ನೂಕಿಕೊಂಡನು.

## ಟ್ವಿನ್ ಟವರ್ ದುರಂತ
## (ವಿವಿಧ ದೃಷ್ಟಿಕೋನಗಳು)

ತೂರ್ಗೂ ಫ್ರಾನ್ಸ್



ಲ್ಯೆಸಾನ್ ಡಿ ಹೊಲೆಂಡಾ ಕಾವಲ್ ಕಾಂಟಿ
ಬ್ರೆಸಿಲ್



ಐಕ್ಯೂ ಬ್ರೆಸಿಲ್



ಪರೇಶ್ ನವದೆಹಲಿ




ಟೌಕಾ ಇರಾನ್







ಅಲೆಕ್ಸಾಂಡರ್ ಜುಡಿನ್ ರಷ್ಯಾ



ಟರ್ನರ್, ಐರ್ಲೆಂಡ್




ಹೆರ್ವಿ, ಚಿಲಿ



# ಎತ್ತ ಹೋಯಿತೋ ಒತ್ತು ಕಾಗದ!

- ರಾಮಿ

''ಇತ್ತೀಚಿನ ವರ್ಷಗಳಲ್ಲಿ ಲೇಖನ ಸಾಮಗ್ರಿಗಳ ಅಂಗಡಿಯಿಂದ ಅಂದರೆ ಸ್ಟೇಷನರಿ ಶಾಪ್‌ಗಳಿಂದ ಮಾಯವಾದ ವಸ್ತುವೊಂದಿದೆ - ಹೇಳಿ ನೋಡೋಣ ಯಾವುದೆಂದು''

ಸ್ನೇಹಿತರು ಒಗಟೊಂದನ್ನು ಹಠಾತ್ತಾಗಿ ಮುಂದಿಟ್ಟಾಗ ನಾನು ಕಕ್ಕಾಬಿಕ್ಕಿ.

ಕೌನ್‌ಬನೇಗ ಕ್ರೋರ್‌ಪತಿಯ ಪ್ರಭಾವ ಎಂದು ಒಳಗೊಳಗೇ ಅನಿಸಿದರೂ ''ನೀವೇ ಹೇಳಿಬಿಡಿ ನೋಡೋಣ'' ಎಂದು ಚೆಂಡನ್ನು ಅವರ ಅಂಗಣಕ್ಕೇ ಎಸೆದೆ.

''ಬ್ಲಾಟಿಂಗ್ ಪೇಪರು ಕಣ್ರೀ ಬ್ಲಾಟಿಂಗ್ ಪೇಪರು - ಈ ಬಾಲ್‌ಪೆನ್ ಯುಗದಲ್ಲಿ ಸ್ಟೇಷನರಿ ಅಂಗಡಿಗೆ ಹೋಗಿ ಬ್ಲಾಟಿಂಗ್ ಪೇಪರ್ ಕೊಡಿ ಅಂತ ಕೇಳಿದರೆ 'ಹಾಗಂದರೇನು?' ಎಂಬ ಸವಾಲು ಬಂದೀತು!

ಅದೇ 50-60 ವರ್ಷಗಳ ಹಿಂದೆ ಆಗಿದ್ದರೆ!

ಒತ್ತು ಕಾಗದವಿಲ್ಲದೆ ಕೆಳಗಿನ ಕ್ಲಾಸಿನ ಮಕ್ಕಳು ತರಗತಿಗೆ ಹೋಗುವುದುಂಟೆ? ಅದರಲ್ಲಿಯೂ ಮಸಿ ಕುಡಿಕೆಯ ಸರದಾರರಾದರೆ ಜೊತೆಗೆ ಒತ್ತು ಕಾಗದದ ತುಣುಕು ಬೇಕೇ ಬೇಕು. ಇಲ್ಲದಿದ್ದರೆ ಅಭ್ಯಾಸದ ಪುಸ್ತಕದಲ್ಲಿ ಒತ್ತುಗಳಾಗಿ ಬೈಸಿಕೊಳ್ಳುವ, ಹೊಡೆಯಿಸಿಕೊಳ್ಳುವ ಅಧ್ವಾನ ತಪ್ಪಿದ್ದಲ್ಲ.

ಪ್ರತಿ ಎಕ್ಸರ್‌ಸೈಜ್ ಪುಸ್ತಕದ ಮೊದಲ ಪುಟಗಳ ನಡುವೆ ಈ ಒತ್ತು ಕಾಗದ ಮಹಾಶಯ ಭದ್ರವಾಗಿರುವನೋ ಎಂದು ನೋಡಿಕೊಂಡೇ ಶಾಲೆಗೆ ಹೊರಡುತ್ತಿದ್ದ ಕಾಲವೊಂದಿತ್ತು. ಆದ್ದರಿಂದ ಬ್ಲಾಟಿಂಗ್ ಪೇಪರುಗಳು ಸ್ಟೇಷನರಿ ಅಂಗಡಿಗಳಲ್ಲಿ ಇದ್ದೇ ಇರುತ್ತಿದ್ದವು.

ಸಾಮಾನ್ಯರ ಮಕ್ಕಳಿಗೆ ಒತ್ತು ಕಾಗದ ಬೇಕಾದರೆ ಅಂಗಡಿಗಳೇ ಗತಿಯಾದರೆ ಡಾಕ್ಟರ್ ಅಥವಾ ಇತರ ಪ್ರತಿಷ್ಠಿತರ ಮಕ್ಕಳಿಗೆ ಮದ್ದಿನ ಅಥವಾ ಇತರ ಸುಪ್ರಸಿದ್ಧ ಬ್ರಾಂಡಿನ ಜಾಹೀರಾತು ಇರುವ ಬಣ್ಣ ಬಣ್ಣದ ಒತ್ತು ಕಾಗದ ದೊರೆಯುತ್ತಿತ್ತು, ಆ ಸಾಮಗ್ರಿಗಳ ಹಂಚಿಕೆದಾರರು ಬ್ಲಾಟಿಂಗ್ ಪೇಪರ್ ಇರುವ ಸೊಗಸಾದ

ಕಾರ್ಡುಗಳನ್ನು ನೀಡಿ ಆಕರ್ಷಿಸುತ್ತಿದ್ದರು. ಆ ಕಾರ್ಡುಗಳ ಒಂದು ಮೈಯಲ್ಲಿ ವರ್ಣರಂಜಿತ ಚಿತ್ರಗಳಿಂದ ಕೂಡಿದ ಜಾಹೀರಾತು, ಒಳಮೈಯಲ್ಲಿ ಬ್ಲಾಟಿಂಗ್ ಪೇಪರು, ಆ ಕಾರ್ಡುಗಳು ಸಾಕಷ್ಟು ದಪ್ಪವಾಗಿಯೂ ಇರುತ್ತಿದ್ದುದರಿಂದ ಬಹಳ ಕಾಲ ಬಾಳುತ್ತಿದ್ದವು. ಅಂಗಡಿಯ ಒತ್ತು ಕಾಗದದ ತುಣುಕುಗಳು ಶಾಯಿ ಹೀರಿ ಹೀರಿ ಕಪ್ಪಾಗಿ ತಿಂಗಳು ಎರಡು ತಿಂಗಳೊಳಗೆ ಚಿಂದಿಯಾಗಿ ಪ್ರಾಣಬಿಡುತ್ತಿದ್ದವು. ಅದೇನಿದ್ದರೂ ಒತ್ತು ಕಾಗದ ಲೇಖನಿಯಂತೆ, ಶಾಯಿಯಂತೆ, ಫೌಂಟನ್ ಪೆನ್ನಿನಂತೆ ಪ್ರಾಥಮಿಕ, ಮಾಧ್ಯಮಿಕ ವಿದ್ಯಾಭ್ಯಾಸದ ಅವಿಭಾಜ್ಯ ಅಂಗವಾಗಿತ್ತು ಆಗ.



ಬಂತೇ ಬಂತು, ಬಾಲ್ ಪೆನ್ನು! ಬ್ಲಾಟಿಂಗ್ ಪೇಪರನ್ನು ಕೇಳುವವರಿಲ್ಲವಾಯಿತು. ಕೈಯಲ್ಲಿ ಶಾಯಿ ಕಲೆ, ಅಂಗಿಯಲ್ಲಿ ಶಾಯಿಕಲೆ, ಪುಸ್ತಕದಲ್ಲಿ ಶಾಯಿಕಲೆ, ಒಮ್ಮೊಮ್ಮೆ ನಮಗೇ ತಿಳಿಯದಂತೆ ಮುಖದಲ್ಲಿಯೂ ಶಾಯಿ ಕಲೆ ಇಂಥದೆಲ್ಲ ಹೇಳ ಹೆಸರಿಲ್ಲದಂತೆ ಮಾಯವಾಗಿದ್ದೇನೋ ನಿಜ. ಆದರೆ ಬ್ಲಾಟಿಂಗ್ ಮಹಾಶಯನೂ ಮರೆಯಾದ.

ಅಳಿದುಳಿದ ಕಮರ್ಶಿಯಲ್ ಎನ್ನಬಹುದಾದ ಸುಂದರ ಒತ್ತು ಕಾಗದಗಳನ್ನು ಪುಸ್ತಕಗಳ ನಡುವೆ ಬುಕ್ ಮಾರ್ಕ್‌ಗಳಾಗಿ ಒಂದಷ್ಟು ಕಾಲ

ಬಳಸಿದ್ದಾಯಿತು. ಈಗ ಆ ಪಾತ್ರದ ನಿರ್ವಹಣೆಗೂ ಅವು ಒದಗುವುದಿಲ್ಲ. ಆಕಸ್ಮಾತ್ತಾಗಿ ಬಹಳ ವರ್ಷಗಳಿಂದ ತೆರೆದು ನೋಡದ ಯಾವುದಾದರೂ ಪೊತ್ತಗೆಯ ನಡುವೆ ಗತಕಾಲದ ಒತ್ತುಕಾಗದವೊಂದು ಇಣುಕಬಾರದೆಂದಲ್ಲ. ಅಂಥದೊಂದು ಪ್ರತ್ಯಕ್ಷವಾದರೆ ಎಷ್ಟೆಲ್ಲ ಹಳೆಯ ನೆನಪುಗಳು ಮರುಕಳಿಸಿ ಯಾವೆಂದು ಹೇಳುವಂತಿಲ್ಲ.

ಗತಕಾಲದ ಇಂಥ ಸನ್ಮಿತ್ರನನ್ನು ದುಷ್ಕೃತ್ಯಗಳಿಗಾಗಿ ಬಳಸಿಕೊಂಡವರೂ ಇದ್ದಾರೆ. ಪರೀಕ್ಷೆಯ ಸಮಯದಲ್ಲಿ ಚುಟುಕು ಉತ್ತರಗಳನ್ನು ಬ್ಲಾಟಿಂಗ್ ಪೇಪರ್ ಬದಿಯಲ್ಲಿ ಸಾಸಿವೆ ಕಾಳಿನ ಅಕ್ಷರಗಳಲ್ಲಿ ಗೀಚಿಟ್ಟುಕೊಂಡು ಹದ್ದಿನ ಕಣ್ಣಿನ ಪರೀಕ್ಷಕರ ಕೈಯಲ್ಲಿ ಸಿಕ್ಕಿಬಿದ್ದವರೂ ಅನೇಕರು, ಗುರುಗಳೊಬ್ಬರು ಹಾಗೆ ಸಿಕ್ಕಿಬಿದ್ದವರನ್ನು ಕೆಂಗಣ್ಣಿನಿಂದ ದಿಟ್ಟಿಸಿ ಬ್ಲಾಟಿಂಗ್ ಪೇಪರನ್ನು ಹರಿದು ಚಿಂದಿ ಚಿಂದಿ ಮಾಡಿ ತೃಪ್ತರಾಗಿದ್ದೂ ಉಂಟು. ಎಷ್ಟೋ ಕಡೆ ಪರೀಕ್ಷಾರ್ಥಿಗಳು ಬ್ಲಾಟಿಂಗ್ ತರಬಾರದೆಂದು ನಿಷೇಧಿಸಿದ್ದೂ ಇದೆ.

ಸ್ನೇಹಿತರ ಒಗಟಿಗೆ ಉತ್ತರ ಹೇಳಲಾಗದೆ ಸೋತೆನಾದರೂ ಅವರ ಪ್ರಶ್ನೆ ಎಷ್ಟೊಂದು ನೆನಪುಗಳನ್ನು ತಂದಿತಲ್ಲ ಎಂದು ಹಿಗ್ಗಲೇಬೇಕಾಯಿತು.

★★★

## ಹಾವು

ಪದವಿ ಪ್ರಶಸ್ತಿ
ಸನ್ಮಾನ ಶಾಲುಗಳಿಗಾಗಿ
ಜೊಲ್ಲು ಸುರಿಸುತ್ತಾ
ಸೇವೆಯ ಸೋಗು ಹಾಕಿದ್ದ ನಾವು
ಮರೆತಿದ್ದೇವೆ ಬಳಿಯಲ್ಲೇ
ಹರಿದಾಡುವ ಸಾವಿನ ಹಾವು

– ಮರು ಬಿರಾದಾರ

# ಕಂಫರ್ಟ್ ಮತ್ತು ಕಂಪನಿ

- ಆನಂದ

ಕೈಲಾಸಂ ಕಾಲದಲ್ಲಿ ಹವಾ ನಿಯಂತ್ರಿತ ರೈಲುಗಳಿರಲಿಲ್ಲ. ಆದುದರಿಂದ ಎ.ಸಿ. 2-tier ಎಂಬ ವರ್ಗವೇ ಇರಲಿಲ್ಲ. ಆದರೂ ಸಹ ಅವರು 'ಸ್ವರ್ಗದಲ್ಲಿ comfort ಇರುತ್ತೆ ಮರಿ. ಆದರೆ company ಇರಲ್ಲ' ಎಂದು ಏಕೆ ಹೇಳಿದರು? ಈ ಪ್ರಶ್ನೆ ಈಗೇಕೆ ಎಂದರೆ ಮೊನ್ನೆ ನಾನು ದೆಹಲಿಗೆ ಈ ಎ.ಸಿ. 2-tier ಎಂಬ ಸ್ವರ್ಗದಲ್ಲೇ ಪ್ರಮಾಣ ಮಾಡಿದಾಗ ಕೈಲಾಸಂ ಅಂದು ಹೇಳಿದ ಮಾತಿನ ರುಚಿ ಕಂಡುಕೊಂಡೆ. ನನ್ನ ಬೋಗಿಯಲ್ಲಿ comfort ಇದ್ದರೂ company ಇರಲಿಲ್ಲ. ಅಂದರೆ ನಾನೊಬ್ಬನೇ ಪಯಣಿಸಿದೆ ಎಂದಲ್ಲ. ಜೊತೆಗೆ, ಹೆಂಡತಿ ಇದ್ದಳು. ಆದರೆ ಬೇರೆ ಕಂಪನಿ ಇರಲಿಲ್ಲ.

ಅಪಾರ್ಥ ಬೇಡ. ಬೇರೆ ಕಂಪನಿ ಎಂದಾಗ ನಾನು ರುಮಾಲು ಗಾಂಧಿ ಕ್ಲಾಸ್‌ನಲ್ಲಿ ಕಂಡು ಬರುವ ಕಂಪನಿ. ಆದುದರಿಂದ ನೀವು ಹುಬ್ಬೇರಿಸಬೇಕಾಗಿಲ್ಲ.



ಗಾಂಧಿ ಕ್ಲಾಸ್ ಅಂದರೆ ಸ್ಲೀಪರ್ ಕ್ಲಾಸ್ ಅದೆಷ್ಟು ವೈವಿಧ್ಯಮಯ? ಫುಲ್‌ಕೋಚ್ ಎಂದರೆ 72 ಮಂದಿ ಎಂದರೂ ಬರುವವರ ಹೋಗುವವರ ಸಂಖ್ಯೆ ಎಣಿಸಲು ಸಾಧ್ಯವೆ? ಚಾಯ್, ಕಾಫಿ, ಸೌತೆಕಾಯಿ, ಚುರಮುರಿ, ಮಸಾಲೆ ವಡೆ, ಕಟ್ಲೆಟ್-ಸಮೋಸ, ಹೀಗೆ ನೀವು ತಿನ್ನಬೇಕಿದ್ದ ಆದರೆ ಮನೆಯಲ್ಲಿ ಲಭ್ಯವಿಲ್ಲದ ಹಲವಾರು ತಿಂಡಿ ತೀರ್ಥಗಳು ಇಲ್ಲಿ ಡೋರ್ ಡೆಲಿವರಿ ಅಥವಾ ಸೀಟ್ ಡೆಲಿವರಿ. ತುಸು ದುಬಾರಿ ಎನಿಸಿದರೂ ನೀವೇನು ಪದೇ ಪದೇ ಪ್ರಯಾಣ ಮಾಡುವುದಿಲ್ಲವಾದ್ದರಿಂದ ಧಾರಾಳವಾಗಿ ದುಡ್ಡು ಕೊಟ್ಟು ಮಿತವಾಗಿ ತಿನ್ನಲು ಸಾಧ್ಯ - ಹೀಗೆ ನಿಮ್ಮ ಜಿಹ್ವಾ ಚಾಪಲ್ಯ ತೀರಿದರೆ ಇನ್ನು 'ಸಿವಿ ಕಣ್ಣುಗಳಿಗೂ ಮನರಂಜನೆ ಸಾಧ್ಯ. ಹಾರ್ಮೋನಿಯಂ, ತಾಳ, ತಮಟೆ ಮುಂತಾದವುಗಳನ್ನು ಹಿಡಿದು ತಂದೆ - ತಾಯಿ - ಮಗ - ಮಗಳು ಹೀಗೆ ಒಂದು ಜೋಡಿ ಹಿಂದಿ/ ಕನ್ನಡ ಗೀತೆಯನ್ನು ತಮಗೆ ತೋಚಿದಂತೆ ಹಾಡಿ ನಂತರ ಕಾಸಿಗೆ ಕೈಯೊಡ್ಡುವ ದೃಶ್ಯ ಮಾಮೂಲು.

ಸ್ಲೀಪರ್ ಕ್ಲಾಸ್ ಒಂದು ಜಾತ್ಯಾತೀತ ಸಮಾಜ. ಪರಸ್ಪರ ಮಾತು, ಸೌಹಾರ್ದತೆ, ಕೊಡು-ಪಡೆ, ಮುಂತಾದವು ಈ ಸಮಾಜದ ಒಂದು ಅವಿಭಾಜ್ಯ ಅಂಗ. ಕೆಳಗಿನ ಸ್ಲೀಪರ್‌ನವರು ಉದಾರವಾಗಿ, ಮೇಲಿನ ಸ್ಲೀಪರ್‌ಗೆ ಹೋಗಿ ತಮ್ಮ ಜಾಗವನ್ನು ಕೈಲಾಗದವರಿಗೆ ಬಿಟ್ಟು ಪ್ರಮೋಷನ್ ಪಡೆಯುವುದು ಮಾಮೂಲು. ಹಾಗೆ ಮೇಲೆ ಹೋಗುವಾಗ ತಮ್ಮ ಸಾಮಾನನ್ನು ಕೆಳಗಿರುವವರ ಜವಾಬ್ದಾರಿಗೆ ವಹಿಸುವುದು ಒಂದು ಅಲಿಖಿತ ಒಪ್ಪಂದ. ಹೀಗೆ ಸ್ಲೀಪರ್ ಕ್ಲಾಸ್‌ನ ಪ್ರಯಾಣಿಕರು ವಸುಧೈವ ಕುಟುಂಬದಂತೆ ಕಂಪನಿಯ ಸುಖದಲ್ಲಿ ಪಯಣಿಸುತ್ತಾರೆ. ಕಂಫರ್ಟ್ ಇಲ್ಲದಿದ್ದರೇನಂತೆ - ಒಂದೆರಡು ದಿನದ ಪ್ರಯಾಣ ತಾನೆ ಎಂಬ ವೈರಾಗ್ಯದಲ್ಲಿ.

ಆದರೆ ಈ ಎ.ಸಿ. 2 tier ನಲ್ಲಿ ಈ ಬೆನಿಫಿಟ್ ಇಲ್ಲ. ಎಲ್ಲ ಸ್ಲೀಪರ್‌ಗಳಿಗೂ ಕರ್ಟನ್ ಹಾಸಿ ಎಲ್ಲರನ್ನೂ ಪ್ರತ್ಯೇಕಿಸಿರುವದರಿಂದ ಅದೊಂದು ಪಂಚತಾರಾ ಶವಾಗಾರವಾಗಿ ನನಗೆ ಕಂಡದ್ದು ಅಚ್ಚರಿ ಏನಲ್ಲ. ಮಧ್ಯಾಹ್ನ ಅಥವಾ ನಡು ರಾತ್ರಿಯಲ್ಲಿ ಎಲ್ಲರೂ ಗಾಢ ನಿದ್ದೆಯಲ್ಲಿದ್ದಾಗ ನೀವು ಆ ಬೋಗಿಯಲ್ಲಿ ಅಡ್ಡಾಡಿದಾಗ ನೀವು ನಿಮ್ಮ ಸೀಟ್ ಮರಳಿ ಹುಡುಕಬೇಕಾದರೆ ಕರ್ಟನ್‌ಗಳನ್ನು

ಸರಿಸಿ, ಇಣುಕಿ ನೋಡಬೇಕಾದ ಅನಿವಾರ್ಯತೆ ಒದಗಿ ಬರುತ್ತದೆ. ಹಾಗೆ ಇಣುಕಿದಾಗ ಒಂದು ಜೋಡಿ ಕಣ್ಣುಗಳು ಪಿಳಿಪಿಳಿಸುತ್ತಿವೆ ಅಥವಾ ದುರುಗುಟ್ಟಿ ನೋಡುತ್ತವೆ. ಹೀಗಾಗಿ ಎಲ್ಲರೂ ಪ್ರತ್ಯೇಕವಾದಿಗಳಂತೆ ತಮ್ಮ ತಮ್ಮ ಸೀಟುಗಳಿಗೆ ಅಂಟಿಕೊಂಡಿರುತ್ತಾರೆ. ಎ.ಸಿ. ಪ್ರಯಾಣಿಕರಾಗಿರುವದರಿಂದ ಹೊರಗಿನಿಂದ ಬರುವ ತಿಂಡಿಗಳಿಗೆ ಪ್ರೋತ್ಸಾಹ ನೀಡದೆ in-house cateringಗೆ ಮಾತ್ರ ಪುರಸ್ಕಾರ. ಇದರಿಂದಾಗಿ ಸ್ಲೀಪರ್ ಕ್ಲಾಸ್‌ನಲ್ಲಿ ಸಿಗುವ ala carte ಇಲ್ಲಿ ಮಿಸ್ಸಿಂಗ್. ಮಾರುವವರೇ ಬಾರದಿದ್ದ ಮೇಲೆ ಇನ್ನು ಬೇಡುವವರು ಬರುತ್ತಾರೆಯೆ, ಪ್ರವೇಶ ನಿಷೇಧ. ಹಾಗಾಗಿ ಮನರಂಜನೆ ಇಲ್ಲ.

ನಿಜ comfort ಇದೆ. ತಲೆದಿಂಬಾಗಿ ನಿಮ್ಮ ಕಿಟ್ ಬ್ಯಾಗ್ ಉಪಯೋಗಿಸಬೇಕಿಲ್ಲ. ಮೆತ್ತಗಿನ ಪಿಲ್ಲೋ ಸಿಗುತ್ತದೆ. ಚಳಿಯಾದರೆ ಹೊದೆಯಲು ರಗ್ ಕೊಡುತ್ತಾರೆ. ಶೌಚಾಲಯದಲ್ಲಿ ಯಾವಾಗಲೂ ನೀರು ಇರುತ್ತದೆ. ರಾತ್ರಿ ಓದುವದಾದರೆ ಪ್ರತ್ಯೇಕ ದೀಪ ಇದೆ.

ಆದರೆ ಕಂಪನಿ?

ಕೈಲಾಸಂ ಸ್ವರ್ಗಕ್ಕೆ ಹೋಗುವ ಮೊದಲೇ, ಎ.ಸಿ. 2 tierನಲ್ಲಿ ಪ್ರಯಾಣ ಮಾಡುವ ಮುಂಚೆಯೇ ಈ ಸತ್ಯ ಹೇಗೆ ಕಂಡುಕೊಂಡರು ಎಂಬುದು ನನಗೆ ಅರ್ಥವಾಗಿಲ್ಲ.

ಆದುದರಿಂದಲೇ ಅವರು genius ಅಲ್ವೇ?

---

**ಕಾಲ**

ವಿದ್ಯಾರ್ಥಿಗಳಿಗಿದು
ಪರೀಕ್ಷೆಯ ಕಾಲ
ಶಿಕ್ಷಕರಿಗೊ?
ಅಗ್ನಿ ಪರೀಕ್ಷೆ ಕಾಲ!

– ಮರು ಬಿರಾದಾರ

---

# ತ್ರಿಪುರ ಸುಂದರಿಯ ಮುಂಗ ಪ್ರವೇಶ

- ಎಸ್.ಎನ್. ಶಿವಸ್ವಾಮಿ

ನನ್ನ ಬಾಲ್ಯಮಿತ್ರ ಕೋ.ಕೊ (ಕೋಲಾರದ ಕೊಟ್ರಪ್ಪ) ರೇಷ್ಮೆನೂಲು ವ್ಯಾಪಾರದಲ್ಲಿ ವಿಶ್ವಮಾನ್ಯ ಶ್ರೀಮಂತನಾಗಿದ್ದ. ಪ್ರೈಮರಿ, ಮಿಡಲ್ ಸ್ಕೂಲಿನಲ್ಲಿ ನನ್ನ ಸಹಪಾಠಿಯಾಗಿದ್ದವನು. ಬುಗುರಿ ಆಟದಲ್ಲಿ ನನ್ನ ಪ್ರಾವೀಣ್ಯಕ್ಕೆ ಬೆರಗಾಗಿ ಅವನು ನನ್ನ ವಿಶೇಷ ಸಂಗಾತಿಯಾಗಿ ಸ್ಕೂಲು ದಿನಗಳನ್ನು ಕಳೆದ. ಆಮೇಲೆ ನಾನು ಹೈಸ್ಕೂಲು ಸೇರಿದೆ. ಕೋಕೊ ಸಾಂಪ್ರದಾಯಕ ವಿದ್ಯಾಭ್ಯಾಸಕ್ಕೆ ವಿದಾಯ ಹೇಳಿ ತಮ್ಮ ವಂಶಸ್ಥರ ''ಕೋಲಾರ್ ಬ್ರದರ್ಸ್'' ಜವುಳಿ ಮಳಿಗೆ ಸಾಲಿನಲ್ಲಿ ವ್ಯಾಪಾರದ ಅನುಭವ ಪಡೆಯುವ ಸಲುವಾಗಿ ಸೇರಿಕೊಂಡ.

ಜವುಳಿಯಿಂದ ರೇಷ್ಮೆ ನೂಲಿಗೆ ಜಂಪ್ ಮಾಡಲು ಎಷ್ಟು ಸಮಯ ಬೇಕು! ಕೋ.ಕೊ. ಸ್ವಂತ ಕಾಲಿನ ಮೇಲೆ ನಿಂತು ಕ್ರಮೇಣ ದೊಡ್ಡ ನಾದ್ರಿಕಾರನಾದ. ನಾನು ಕಾಲೇಜು ಮೇಷ್ಟರಾದೆ. ಆ ವೇಳೆಗೆ ಇಬ್ಬರಿಗೂ ಬುಗುರಿಯ ಸಂಬಂಧವಿಲ್ಲದಿದ್ದರೂ ಬೆಳಗಿನ ಜಾಗಿಂಗ್ ಸಮಯದಲ್ಲಿ ಸೇರಿ ಹಳೆಯ ಕಾಲದ ನೆನಪು ಮಾಡಿಕೊಳ್ಳುವ ಅವಕಾಶವಿತ್ತು. ಕೋ.ಕೊ. ಮದುವೆಯಾದರೂ, ಅವಸರ ಲಗ್ನವಾದ ಕಾರಣ ನನ್ನನ್ನು ಕರೆಯಲು ಮರೆತದ್ದೂ ಜಾಗಿಂಗ್ ಸಮಯದಲ್ಲೇ ತಿಳಿಯಬಂದದ್ದು. ಅವನ ಹೆಂಡತಿ ಗುಬ್ಬಿಯ ಪ್ರಖ್ಯಾತ ಕೊಬ್ಬರಿ ವ್ಯಾಪಾರಸ್ಥರಾದ ಗುಬ್ಬಯ್ಯನವರ ಒಬ್ಬಳೇ ಮಗಳು. ಗುಬ್ಬಯ್ಯ ತುಮಕೂರಿನಲ್ಲಿ ದೊಡ್ಡ ಕೊಬ್ಬರಿ ಮಿಠಾಯಿಯ ಆಕರ್ಷಕ ಪ್ಯಾಕೆಟ್ಟುಗಳನ್ನು ತಯಾರಿಸಿ ದೇಶದ ಪ್ರತಿಯೊಂದು ನಗರ, ಗ್ರಾಮದಲ್ಲೂ ಮಾರಾಟ ಮಾಡುವ ವ್ಯವಸ್ಥೆ ಮಾಡಿ, ವಿದೇಶಿಗರಿಗೂ ವ್ಯಾಗನ್‌ಗಟ್ಟಲೆ ರಫ್ತು ಮಾಡಿ ಅಪಾರ ಸಂಪತ್ತು ಗಳಿಸಿದ್ದರು.

ಜಾಗಿಂಗ್ ಸಮಯದಲ್ಲಿ ಕೋ.ಕೊ.ವಿನ ದಾಂಪತ್ಯ ಜೀವನದ ಬಗ್ಗೆ ನನಗೆ ಸಾಕಷ್ಟು ಸಮಾಚಾರ ತಿಳಿದುಬಂತು. ಅವನ ಹೆಂಡತಿಯ ಹೆಸರು ಸುಬ್ಬಮ್ಮ, ಚಿಕ್ಕಂದಿನಲ್ಲೇ ಸುಮ್ಮಬ್ಬ ಬೆಂಗಳೂರಿನಲ್ಲಿ ಎಲ್ಲಾ ಶೈಲಿಯ ನೃತ್ಯಕಲಾ ಶಾಲೆಗಳಲ್ಲೂ ತಲೆಹಾಕಿ ನಾಟ್ಯ ಕಲಿಯುವ ಶಾಸ್ತ್ರ ಮಾಡಿದ ಮೇಲೆ ಅವಳ ಹೆಸರನ್ನು ಮನೆಯವರು ಜ್ಯೋತಿಶ್ರೀ ಅಂತ ಬದಲಾಯಿಸಿ ಅವಳ ರಂಗಪ್ರವೇಶ ಮಾಡಿಸಿದ್ದರು.

ಜ್ಯೋತಿಶ್ರೀ ತನ್ನ ಒಂದು ವರ್ಷ ಮಗು ತ್ರಿಪುರ ಸುಂದರಿಯನ್ನೂ ಕರೆದುಕೊಂಡು ಕೆನಡಾಗೆ ವಲಸೆ ಹೋಗಿ ಅಪ್ಪನ ಕೊಬ್ಬರಿ ಮಿಠಾಯಿಗೆ ಅಲ್ಲಿಂದ

ಡಾಲರ್ ಸಂಪಾದಿಸಿಕೊಡುವ ವ್ಯವಹಾರದಲ್ಲಿ ನಿರತಳಾದಳು. ಜತೆಗೆ ತನ್ನ ನೃತ್ಯಾಭ್ಯಾಸವನ್ನೂ ಅಲ್ಲೇ ಮುಂದುವರಿಸುವ ಏರ್ಪಾಡುಗಳನ್ನೂ ಮಾಡಿಕೊಂಡಳು. ಮಗಳಿಗೂ ನಾಟ್ಯ ಕಲಿಸಿದಳು. ಇಲ್ಲಿದ್ದ ಅವಳ ನಾಟ್ಯ ಗುರು, ನಟ್ಟುವನಾರ್ ಸಂಜಯ್ಯ ಪಿಳ್ಳೆಯನ್ನೂ ಕೆನಡಾಗೇ ಬರಮಾಡಿಕೊಂಡು ಆತನಿಗೂ ಆತನ ಪರಿವಾರಕ್ಕೂ ವಸತಿ ಸೌಕರ್ಯ ಏರ್ಪಡಿಸಿಕೊಟ್ಟದ್ದರು. ಭಾರಿ ಪ್ರಚಾರದ ಭರಾಟೆ ನಡೆಸಿ ತಾನೊಬ್ಬ ಅಗ್ರಶ್ರೇಣಿಯ ನೃತ್ಯಗಾತಿಯೆಂದು ಹೆಸರು ಮಾಡಿದಳು. ಈ ಬಗ್ಗೆ ಮಾಹಿತಿಯೆಲ್ಲ ನನಗೆ ಕೋ.ಕೊ.ವಿನ ಸೆಕ್ರೆಟರಿ ತಂಗಮುತ್ತು ಒದಗಿಸಿದ.

ಕೋ.ಕೊ. ತಿಂಗಳಿಗೊಮ್ಮೆ ಕೆನಡಾಗೆ ಹೋಗಿ ಬರುತ್ತಿದ್ದ. ಉಳಿದಂತೆ ಅವನದು ''ಈಮೇಲ್ ದಾಂಪತ್ಯ''ವೇ. ಹೀಗೆ ಸುಮಾರು ಹದಿನೈದು ವರ್ಷಗಳು ಕಳೆದ ಮೇಲೆ ಜ್ಯೋತಿಶ್ರೀ ಭಾರತಕ್ಕೆ ಹಿಂದಿರುಗುವ ಯೋಚನೆಯನ್ನೇ ಬಿಟ್ಟು ಕೆನೆಡಿಯನ್ ಸಿಟಿಜನ್ ಆದಳೆನ್ನುವುದನ್ನು ತಂಗಮುತ್ತು ನನಗೆ ಹೇಳಿದ. ನಾನಂತೂ ಜ್ಯೋತಿಶ್ರೀಯನ್ನಾಗಲಿ ತ್ರಿಪುರ ಸುಂದರಿಯನ್ನಾಗಲಿ ನೋಡಿರಲಿಲ್ಲ. ಆದರೆ ಅವರ ವರ್ಣನೆಯನ್ನು ವಿರಹಪೀಡಿತ ಕೋ.ಕೊ. ಬಾಯಿಂದ ಪದೇ ಪದೇ ಕೇಳಿ ನಾನು ಅವರಿಬ್ಬರ ಸೌಂದರ್ಯದ ಕಲ್ಪನೆ ಮಾಡಿಕೊಂಡಿದ್ದೆ.

ಈ ಶತಮಾನದ ತಿರುವಿನಲ್ಲಿ, ಕೋ.ಕೊ. ತನ್ನ ಮಾಸಿಕ ಯಾತ್ರೆ ಮುಗಿಸಿಕೊಂಡು ಬಂದ ಮೇಲೆ ತನ್ನ ಮರ್ಸಿಡಿಸ್ ಕಾರಿನಲ್ಲಿ ತಂಗಮುತ್ತುವನ್ನು ನನ್ನ ಮನೆಗೆ ಒಂದು ತುರ್ತು ಸಂದೇಶದೊಂದಿಗೆ ಕಳಿಸಿದ. ನಮ್ಮ ಜಾಗಿಂಗ್ ಈ ನಡುವೆ ವಯೋಧರ್ಮವನ್ನನುಸರಿಸಿ ವಾಕಿಂಗ್ ಆಗಿ ಮಾರ್ಪಟ್ಟಿತ್ತು. ಸಮಯ ಮಾತ್ರ ಅದೇ, ಬೆಳಿಗ್ಗೆ. ಬೆಳಗಿನ ತನಕ ಕಾಯಲಾರದೆ ಈಗಲೇ ಕಾರ್ ಕಳಿಸಿ ನನ್ನನ್ನು ಕರೆಸಿಕೊಳ್ಳುವ ಪರಿಸ್ಥಿತಿ ಬಹಳ ತುರ್ತಿನದೇ ಇರಬೇಕೆಂಬ ನನ್ನ ಊಹೆ ಸರಿಯಾಗಿಯೇ ಇತ್ತು.

ಜ್ಯೋತಿಶ್ರೀ ಕೊನೆಗೂ ಒಂದು ಸಾರಿ ಭಾರತಕ್ಕೆ ಬರುವ ಕಾರ್ಯಕ್ರಮ ಹಾಕಿಕೊಂಡಿದ್ದಳು! ಕೆನಡಾದಲ್ಲಿ ಹೆಸರುವಾಸಿಯಾಗಿದ್ದ ಅವಳ ''ತ್ರಿಪುರ ಸುಂದರಿ ನಾಟ್ಯಕಲಾ ಕೇಂದ್ರ'' ಈ ಸಲ ಬೆಂಗಳೂರಿನಲ್ಲಿ ತನ್ನ ಪ್ರದರ್ಶನ ನೀಡುವ ಉದ್ದೇಶ. ''ಸೀತಾ ವನವಾಸ'' ಎಂಬ ತನ್ನ ಜನಪ್ರಿಯ ನೃತ್ಯ ರೂಪಕವನ್ನು ಇಲ್ಲಿಯ ರಸಿಕರಿಗೆ ತೋರಿಸುವ ನಿಶ್ಚಯ ಆಗಿತ್ತು. ಇದಕ್ಕಾಗಿ ಜ್ಯೋತಿಶ್ರೀ ಗುರು ಸಂಜಯ್ಯಪಿಳ್ಳೆಯಲ್ಲದೆ ವಾದ್ಯ ಮೇಳ, ಪರಿವಾರ ಸಮೇತ ಬೆಂಗಳೂರಿಗೆ ಪ್ರಯಾಣ ಹೊರಟಿದ್ದಳು. ಈ ''ಕೌಟುಂಬಿಕ ರಂಗಪ್ರವೇಶ''ಕ್ಕಾಗಿ ಮಾಡಬೇಕಾದ ಏರ್ಪಾಡುಗಳನ್ನೆಲ್ಲ ಕೋ.ಕೊ.ವಿನ ತಲೆಯ ಮೇಲೆ ಹೇರಿ ತಾವು

ಮುಂದಿನ ವಾರ ಬರುವ ವೇಳೆಗೆ ಯಾವ ಲೋಪವೂ ಇಲ್ಲದೆ ಸಿದ್ಧತೆಗಳೆಲ್ಲ ಆಗಿರಬೇಕೆಂದು ಜ್ಯೋತಿಶ್ರೀ ಕೋ.ಕೊ.ವನ್ನು ಎಚ್ಚರಿಸಿದ್ದಳು.

ಕೋ.ಕೊ.ಗೆ ನೃತ್ಯ ಕಲೆಯ ಬಗ್ಗೆಯಾಗಲಿ, ಯಾವುದೇ ಕಲೆಯ ಬಗ್ಗೆಯಾಗಲಿ ಎಳ್ಳಷ್ಟೂ ಪರಿಚಯ ಇಲ್ಲ. ಅದಕ್ಕೇ ಆತನು ಅಷ್ಟು ಅರ್ಜೆಂಟಾಗಿ ತನ್ನ ಆಪ್ತಮಿತ್ರನಾದ ನನ್ನ ಬಳಿಗೆ ಬಂದು ಶರಣಾಗತನಾದದ್ದು. ಅಂತೂ ತನ್ನ ತಲೆ ನೋವನ್ನು ಕೋ.ಕೋ. ಸಂಪೂರ್ಣವಾಗಿ ನನ್ನ ತಲೆಗೆ ಕಟ್ಟಿಬಿಟ್ಟಿದ್ದ. ಈಗ ನಾನು ತ್ರಿಪುರ ಸುಂದರಿಯ ಭಾರತ ''ರಂಗಪ್ರವೇಶ''ವನ್ನು ಯಶಸ್ವಿಯಾಗಿ ನೆರವೇರಿಸುವ ಜವಾಬ್ದಾರಿ ಹೊತ್ತಿದ್ದೆ.

ನನಗೆ ತಾನೆ ನೃತ್ಯ ಕಲಾಪ್ರದರ್ಶನದ ಅನುಭವ ಎಲ್ಲಿಂದ ಬರಬೇಕು! ಕಾಲೇಜು ಅಸೋಸಿಯೇಷನ್ ಕಾರ್ಯದರ್ಶಿಯಾಗಿ ಅದರ ರಜತೋತ್ಸವದ ಅಂಗವಾಗಿ ಸಾಮೂಹಿಕ ನೃತ್ಯ ಏರ್ಪಡಿಸಿದ್ದೆ ಅಷ್ಟೆ. ಈಗ ಕೋ.ಕೊ.ಗೆ ಬೇಕಾದದ್ದು ಪೂರ್ಣ ಪ್ರಮಾಣದ ರಂಗಪ್ರವೇಶ ಏರ್ಪಡಿಸುವ ಅನುಭವ. ಅದು ನನ್ನಲ್ಲಿಲ್ಲವೆಂಬ ನಿಜ ಸಂಗತಿಯನ್ನು ಕೋ.ಕೊ.ಗೆ ತಿಳಿಸಿದೆ. ಅವನು ''ಇದೂ ನೀನು ಆಗ ಏರ್ಪಾಡು ಮಾಡಿದ್ದ ಸಾಮೂಹಿಕ ನೃತ್ಯದ ಥರಾನೇ. ಅಶೋಕನಗರದ ತುಂಬ ಕಾವಲು ಕಾಯುವ ರಾಕ್ಷಸಿಯರ ಸಮೂಹ ಇರುತ್ತೆ''. ಅಂತ ಸಮಜಾಯಿಷಿ ಹೇರಿದ. ಅವರ ಅಸಹಾಯಕತೆಗೆ ನಮ್ಮ ಮನಸ್ಸು ಕರಗಿತು. ಹೇಗಾದರೂ ಸರಿ, ಅವನಿಗೆ ನೆರವಾಗಲು ನಿಶ್ಚಯಿಸಿದೆ. ಈ ಕೆಲಸ ನೆರವೇರಬೇಕಾದರೆ ಒಬ್ಬ ದಕ್ಷ ಕಂಟ್ರಾಕ್ಟರನ್ನು ಹಿಡಿದರೆ ಆಯಿತು ಅನ್ನಿಸಿತು. ಥಟ್ಟನೆ ನನಗೆ ಕಾಲೇಜಿನ ಕಂಟ್ರಾಕ್ಟರ್ ಕಣ್ಣಪ್ಪನ ನೆನಪಾಯ್ತು. ಕಣ್ಣಪ್ಪನೇ ನಮ್ಮ ರಜತೋತ್ಸವದ ಕಾರ್ಯಕ್ರಮಗಳನ್ನೆಲ್ಲ ನೆರವೇರಿಸಿಕೊಟ್ಟವನು. ಆಗ ನಾವು ಎಲ್ಲಾ ಜವಾಬ್ದಾರಿಯನ್ನೂ ಕಣ್ಣಪ್ಪನ ಕೈಗೆ ಒಪ್ಪಿಸಿ ಅವನಿಗೆ ಒಟ್ಟಾಗಿ ಹಣ ಪಾವತಿ ಮಾಡಿದ್ದೆವು. ಇದೇ ಒಪ್ಪಂದ ಒಳ್ಳೆಯದೆಂದು ಕೋ.ಕೊ.ಗೆ ಸಲಹೆ ಮಾಡಿದೆ. ಅವನು ''ಏನಾದ್ರೂ ಮಾಡಿಕೋ, ಎಷ್ಟಾದ್ರೂ ಖರ್ಚಾಗಲಿ. ಜ್ಯೋತಿಶ್ರೀ ಕಡೆಯಿಂದ ಯಾವ ಕಂಪ್ಲೆಂಟೂ ಬರಬಾರದು ಹಾಗಿದ್ದರೆ ಸರಿ'' ಅಂದುಬಿಟ್ಟ.

ಕಣ್ಣಪ್ಪನಿಗೆ ಕೆಲಸ ಒಪ್ಪಿಸಿ ನಿಸೂರೆನ್ನಿಸಿದರೂ ಅಂತಿಮ ಜವಾಬ್ದಾರಿ ನನ್ನದೇ ತಾನೇ. ಒಂದೊಂದು ಏರ್ಪಾಡಿನ ಮೇಲೂ ನಿಗಾ ಇಟ್ಟು ಮೇಲ್ವಿಚಾರಣೆ ಮಾಡಿಕೊಳ್ಳುತ್ತಿದ್ದೆ. ಯಾವ ಪ್ರತಿಷ್ಠಿತ ರಂಗಮಂದಿರವೂ ನಮ್ಮ ತಾರೀಖಿಗೆ ಲಭ್ಯವಾಗಿರಲಿಲ್ಲ. ಕಣ್ಣಪ್ಪ ಯಾವುದೋ ಸ್ಕೂಲಿನ ಆವರಣದಲ್ಲೇ ಅಂದವಾಗಿ ಚಪ್ಪರ ಹಾಕಿಸಿ ವೇದಿಕೆ ನಿರ್ಮಿಸುವುದಾಗಿ ಅಭಯ ನೀಡಿದ. ರಂಗಸ್ಥಳ, ಪರದೆ, ರಂಗಸಜ್ಜಿಕೆಗಳಾದ ಮೇಲೆ ಮುಂದಿನದು ಪ್ರಚಾರ, ಕರೆಯೋಲೆ ವಿತರಣೆ

ಕಾರ್ಯ. ತೂಕದ ಇಸಮುಗಳ ಹೆಸರು, ವಿಳಾಸಗಳನ್ನು ಟೆಲಿಫೋನ್ ಡೈರೆಕ್ಟರಿಯಿಂದ ಸಂಪಾದಿಸಿದೆ. ತಂಗಮುತ್ತು ಒಂದು ಪ್ರಸಿದ್ಧ ಮುದ್ರಣಾಲಯದಲ್ಲಿ ಆಹ್ವಾನ ಪತ್ರಿಕೆ ಮುದ್ರಿಸುವ ಹೊಣೆ ಹೊತ್ತ. ಪತ್ರಕರ್ತರ ಸಮ್ಮೇಳನ ಏರ್ಪಡಿಸಿ ಧಂಡಿಯಾಗಿ ತಿಂಡಿ ತೀರ್ಥ ವಿನಿಯೋಗಿಸಿ, ಜಾಹೀರಾತುಗಳನ್ನು ಮುದ್ರಿಸಿ, ಕಾರ್ಯಕ್ರಮದ ವಿವರಗಳು ದಿನಪತ್ರಿಕೆಗಳಲ್ಲೆಲ್ಲಾ ಪ್ರಕಟವಾಗುವುದನ್ನು, ಜ್ಯೋತಿಶ್ರೀಯಿಂದ ಪ್ರಚಾರ ಕಾರ್ಯದ ಸೂಕ್ಷ್ಮಗಳನ್ನು ಕಲಿತಿದ್ದ ತಂಗಮುತ್ತು ನೋಡಿಕೊಂಡ. ಆಹ್ವಾನ ಪತ್ರಿಕೆಗಳೆಲ್ಲಾ ವಿಲೇವಾರಿಯಾಗಿ ಹೋಗಿ ನನ್ನ ಕೈಗೆ ಕೂಡ ಮಾದರಿಗಾಗಿ ಒಂದೂ ಸಿಕ್ಕಿರಲಿಲ್ಲ.

ರಂಗಭೂಮಿಯಲ್ಲಿ ಲೇಸರ್ ಒಳಗೊಂಡಂತೆ ಸಮೃದ್ಧಿಯಾಗಿ ವಿದ್ಯುತ್ ಸರಬರಾಜು, ವಿಡಿಯೋ, ಮೈಕ್, ಸ್ಪೀಕರ್, ಇಂಥ ತಾಂತ್ರಿಕ ವ್ಯವಸ್ಥೆಗಳನ್ನು ಕಣ್ಣಪ್ಪ ಖಾತರಿ ಮಾಡಿದ್ದ. ಒಡವೆ ವಸ್ತ್ರಗಳನ್ನು ಬಾಡಿಗೆಗೆ ತರುವುದಕ್ಕಿಂದ ಖರೀದಿ ಮಾಡಿಬಿಡುವುದೇ ಉತ್ತಮವೆಂದು ಕೋ.ಕೋ. ನಿರ್ಧರಿಸಿದ ಮೇಲೆ ಅವರ ಎನ್ನಾರೈ ಅಕೌಂಟ್‌ನಿಂದ ಹಣದ ಹೊಳೆಯೇ ಸುರಿದು ಬಂತು. ಕಂಪೆನಿ ಕಾರುಗಳನ್ನು ಯಥೇಚ್ಛವಾಗಿ ಓಡಾಡಿಸಿ ಚೆನ್ನೈಯಿಂದ ರೇಷ್ಮೆ ಸೀರೆಗಳು, ನಾಟ್ಯ ಸಂಬಂಧದ ಒಡವೆಗಳು ಎಲ್ಲವನ್ನೂ ಖರೀದಿ ಮಾಡಿದೆವು. ಒಡವೆಗಳಂತೂ ಒಂದೂ ಬಿಡದೆ ಅಂದುಗೆ, ಉಂಗುರ, ಅಡ್ಡಿಕೆ, ಮೂಗುತಿ ಬುಲಾಕು, ಚೂಡಾಮಣಿ, ಡಾಬು, ಕಡಗ, ಜುಮುಕಿ, ತೋಳುಬಂದಿ, ಹಾರ, ಎಲ್ಲವನ್ನೂ ಚೆನ್ನೈಯ ಸುಪ್ರಸಿದ್ಧ 'ಭರತ್ ಎಂಪೋರಿಯಂ' ನಲ್ಲೇ ಕೊಂಡುಕೊಂಡೆವು. ಈ ಆಭರಣಗಳೆಲ್ಲ ಮಂಡೋದರಿ ಪಾತ್ರಕ್ಕೆ ಮಾತ್ರ ಬೇಕೆಂದೂ ಸೀತೆ ನಿರಾಭರಣಗಳೆಂದೂ, ಉಳಿದಂತೆ ರಾಕ್ಷಸಿಯ ಪಾತ್ರಗಳಿಗೆ ಕಡಗ, ಗೆಜ್ಜೆ, ಕಿರುಗಂಟೆಗಳು ಮಾತ್ರ ಸಾಕೆಂದೂ ತಿಳಿದಾಗ ನಾನು ತ್ರಿಪುರ ಸುಂದರಿ ಮಂಡೋದರಿ ಪಾತ್ರದಲ್ಲೇ ಕಾಣಿಸಿಕೊಳ್ಳಬಹುದು, ನಾನು ಅವಳ ಸೌಂದರ್ಯವನ್ನು ಮೊಟ್ಟಮೊದಲಿಗೆ ನೋಡಿ ತೃಪ್ತಿ ಹೊಂದಬಹುದು ಎನ್ನುವ ಆಸೆ ನನ್ನಲ್ಲಿ ಅಂಕುರಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ.

ರಂಗಪ್ರವೇಶದ ಕೊನೆಯ ತಯಾರಿಕೆಯಲ್ಲಿ ಪುಷ್ಪಾಲಂಕಾರ, ಮೇಕಪ್ ಸಾಮಗ್ರಿ, ಹೊಂದಾಣಿಕೆ ಹಾಗೂ ಕ್ಯಾಂಟೀನ್ ವ್ಯವಸ್ಥೆ ಉಳಿದವು. ಇವುಗಳೆಲ್ಲ ಕಣ್ಣಪ್ಪನಿಗೆ ಚಿಲ್ಲರೆ ಬಾಬ್ತುಗಳು. ರಾಕ್ಷಸಿಯರಿಗೆ ಕೋರೆಹಲ್ಲು, ದಟ್ಟಹುಬ್ಬು, ಕೆಂಗಣ್ಣು, ನಿಕಿಶ ಮೂಗುಗಳ ಮುಖವಾಡಗಳು ಸಿದ್ಧವಾದವು. ತ್ರಿಜಟೆಗೆ ಮುಖವಾಡ ಬೇಕಾಗಿರಲಿಲ್ಲ.

ವೇದಿಕೆ ಮರದ ಹಲಗೆಗಳ ಮೇಲೆ ನಿರ್ಮಿತವಾಯ್ತು. ಹಲಗೆಗಳ ಮೇಲೆ ಧಿಂಧಿಂ ಅಂತ ಅಡವುಗಳು ಬಿದ್ದರೆ ಅದೇ ನೃತ್ಯಕ್ಕೆ ಕಳೆ ಅನ್ನುವುದು.

ಕಣ್ಣಪ್ಪನ ವಾದ, ತಂಗಮುತ್ತುವಿನ ಅನುಮೋದನೆ, ವೇದಿಕೆಯ ಬಹುಭಾಗ ನಟ್ಟುವಾಂಗ, ಜ್ಯೋತಿಶ್ರೀ (ಪಾರ್ಶ್ವಗಾಯಕಿ) ತಂಬೂರಿ, ಹಾರ್ಮೋನಿಯಂ, ಮೃದಂಗ, ಚಂಡೆ, ಕೊಳಲು, ವಯೊಲಿನ್, ಕಂಜಿರಾ, ಮೋರ್ಚಿಂಗ್ ಇವುಗಳಿಗೆಲ್ಲ ಮೀಸಲಾಗಿತ್ತು.

ಸಭಾಂಗಣ ನೆಲಕ್ಕೆಲ್ಲಾ ನಾರು ಜಮಖಾನ ಹಾಸಿ, ಸುಖಾಸನಗಳನ್ನು ಸಜ್ಜುಮಾಡಿ, ಸಾಲು ಸಾಲು ಫ್ಯಾನ್‌ಗಳನ್ನು ಹಾಕಿಸಿ, ಕಣ್ಣು ಕೋರೈಸುವಂತೆ ದೀಪಾಲಂಕಾರಮಾಡಿ ಕಣ್ಣಪ್ಪ ತನ್ನ ಕಾರ್ಯದಕ್ಷತೆ ತೋರಿಸಿದ್ದ. ಖರ್ಚುಗಳಿಗೆ ಅವನು ಧಾರಾಳವಾಗಿ ಅಡ್ವಾನ್ಸ್ ಸುರಿಯುತ್ತಿದ್ದ ಅನ್ನಿ.

ಮಹಾಜನರ ಸ್ವಾಗತಕ್ಕಾಗಿ ಚಪ್ಪರದ ಹೊರಗೆ ನಾಗಸ್ವರ ಏರ್ಪಾಡಾಗಿತ್ತು. ಆಹ್ವಾನಿತರ ಮೇಲೆ ಗಂಧಸಿಂಚನೆ, ಪುಷ್ಪವೃಷ್ಟಿ, ಕೈಗಳಿಗೆ ಗುಲಾಬಿ ಹೂಗಳು. ಸಭಾಂಗಣ ಬೇಗ ತುಂಬಿತು. ಮುಂದಿನ ಸಾಲಿನ ಸೋಫಾ ಒಂದರಲ್ಲಿ ನಾನೂ ವಿರಾಜಿಸಿದೆ. ನನ್ನ ಪಕ್ಕದಲ್ಲಿ ವಿಐಪಿಯೊಬ್ಬರು ಕಿವಿಗೆ ಸೆಲ್‌ಫೋನ್ ಹಚ್ಚಿ ಅದರಲ್ಲೇ ಮಗ್ನರಾಗಿದ್ದರಾದರೂ ಆಗಾಗ ನನ್ನ ಕಡೆ ತಿರುಗಿ ರಂಗದ ಮೇಲೆ ನಡೆಯುತ್ತಿರುವ ರೂಪಕದ ಬಗ್ಗೆ ಏನಾದರೂ ಪ್ರಶ್ನೆ ಕೇಳುತ್ತಿದ್ದರು. ಕಾರ್ಯಕ್ರಮದ ಕೊನೆಯಲ್ಲಿ ಅವರು ''ಎರಡು'' ಮಾತುಗಳನ್ನಾಡಲೇ ಬೇಕಿತ್ತಲ್ಲ! ನನಗಾದರೋ, ತ್ರಿಪುರಸುಂದರಿ ನಿರಾಭರಣ ಸುಂದರಿ ಸೀತಾ ದೇವಿಯ ಭೂಮಿಕೆಯಲ್ಲೋ ಅಥವಾ ಸರ್ವಾಲಂಕಾರಶೋಭಿತೆ ಮಂಡೋದರಿಯ ಭೂಮಿಕೆಯಲ್ಲೋ ಎನ್ನುವ ಗೊಂದಲವೇ ಮುಖ್ಯವಾಗಿದ್ದು ಬೇರೆ ಯಾವ ವಿವರಗಳನ್ನೂ ನಾನು ಗಮನಿಸಿರಲಿಲ್ಲ. ವಿಐಪಿಯ ಸಂದೇಹಗಳನ್ನು ನಿವಾರಿಸಲು ಹಿಂದೆ ಕೂತಿದ್ದ ತಂಗಮುತ್ತುವಿಗೆ ಆದೇಶ ನೀಡಿದ್ದೆ.

''ಸೀತಾವನವಾಸ'' ಶೋಕಪ್ರಧಾನವಾಗಿತ್ತು. ಜ್ಯೋತಿಶ್ರೀಯ ಅಪಸ್ವರದ ಹಾಡುಗಾರಿಕೆ ನಮ್ಮ ಶೋಕವನ್ನು ಹೆಚ್ಚಿಸಿತ್ತು. ನೆಗೆದಾಟಗಳೆಲ್ಲ ರಕ್ಕಸಿಯರದೇ. ತ್ರಿಜಟೆಯೊಬ್ಬಳು ಮಾತ್ರ ಸೌಮ್ಯ. ಉಳಿದ ರಕ್ಕಸಿಯರು ಹಾಹಾ ಹೋಹೋ ಎಂದು ಮೈಮರೆತು ಕುಣಿದು ಸೀತೆಯನ್ನು ಮಣಿಸಲು ಪ್ರಯತ್ನಿಸುತ್ತಿದ್ದರು.

'ಸೀತಾವನವಾಸ'ದ ಕಾಲಾವಧಿ ಸುಮಾರು ಒಂದೂವರೆ ಗಂಟೆ ಅಂತ ತಂಗಮುತ್ತು ಹೇಳಿದ್ದ. ಕಾರ್ಯಕ್ರಮ ಮುಗಿಯುತ್ತ ಬಂದಹಾಗೆ ಸೀತೆಯ ಆಕ್ರಂದನ ಕೇಳಿ ಬೇಸತ್ತದ್ದಲ್ಲದೆ ರಾಕ್ಷಸಿಯರ ಆರ್ಭಟದಿಂದಾಗಿ ಕಣ್ಣುಮುಚ್ಚಿ

ತೂಕಡಿಸಲೂ ಅವಕಾಶವಿಲ್ಲದೆ ನನ್ನ ಹಾಗೆ ನೂರಾರು ಪ್ರೇಕ್ಷಕರು ಸುಸ್ತಾಗಿದ್ದರು. ಇದ್ದಕ್ಕಿದ್ದ ಹಾಗೆ ತೆರೆಯ ಹಿಂದೆ ಫಿರಂಗಿ ಹಾರಿಸಿದ ಸದ್ದು! ನೇಪಥ್ಯದ ಒಂದು ಮರದ ಕೊಂಬೆಯ ಮೇಲಿಂದ ಒಂದು ಮಹಾಕಪಿ ದುಢುಮ್ಮೆಂದು ನೆಗೆದು ಬಂದು ಚಂಡೆ ಶಬ್ದದೊಂದಿಗೆ ಸೀತೆ ಬೆಚ್ಚುವಂತೆ ಆಕೆಯದುರಿಗೆ ಕೈಜೋಡಿಸಿಕೊಂಡು ನಿಂತಿತು. ಒಂದೇ ಕ್ಷಣ; ಕಪಿಯ ಮೈಮುಖವೆಲ್ಲ ನೀಲಿಬಣ್ಣದ ತುಪ್ಪಟ, ಮೂತಿ ಮಾತ್ರ ಕೆಂಪು, ತುಂಬಿಯಂತೆ ಬಾಗಿದ ಬಾಲ, ಇಷ್ಟರ ಅರಿವಾಯಿತು. ಅದು ಆ ಕ್ಷಣದಲ್ಲಿ ಮರದ ಹಲಗೆ ಮುರಿಯುವಂತೆ ಹಾರಿ ಬಂದು ಬಿದ್ದ ರಭಸಕ್ಕೆನ್ನುವಂತೆ ಫಕ್ಕನೆ ದೀಪಗಳೆಲ್ಲಾ ಆರಿಹೋದವು ''ಗೋಡ್ಜಿಲ್ಲಾ'' ಇತ್ಯಾದಿ ಕಾರ್ಟೂನ್‌ಗಳನ್ನು ನೋಡಿ ಪಳಗಿದ ಮಕ್ಕಳು 'ವವ್' ಎಂದು ಉದ್ಗರಿಸಿದರೆ, ಇತರ 'ದೇಸಿ' ಮಕ್ಕಳು ಭಯದಿಂದ ಚೀರಿದವು. ದೊಡ್ಡವರು ಗಲಿಬಿಲಿಯಿಂದ ಆಚೆ ಓಡಿಹೋಗುವ ದಾರಿಗೆ ತಡಕಾಡಿದ್ದರು. ಧಿಗ್ಗನೆ ಎಚ್ಚರಗೊಂಡ ನನ್ನ ಮಗ್ಗುಲ ವಿಐಪಿ ''ಏನು, ಏನಾಯ್ತು'' ಅಂತ ಬಡಬಡಿಸಿದರು. ತಂಗಮುತ್ತು ನನ್ನ ಹಿಂದಿನಿಂದ ನನ್ನನ್ನು ತಿವಿದು ''ಅದೇ ತ್ರಿಪುರಸುಂದರಿ, ಹನುಮಾನ್ ವೇಷದಲ್ಲಿ'' ಅಂತ ನನಗೆ ತಿಳುವಳಿಕೆ ನೀಡಿ ಕಣ್ಣಪ್ಪನನ್ನು ಹುಡುಕಿಕೊಂಡು ತೆರೆಯ ಹಿಂಭಾಗಕ್ಕೆ ಹೋದ.

ನಾನು ಇಂದಿಗೂ ಮರೆಯದ ದೃಶ್ಯವೆಂದರೆ ಹನುಮಂತನ ಮುಖವಾಡವೇ ಇಲ್ಲದೆ ಸ್ವಾಭಾವಿಕವಾಗಿಯೇ ಕಪಿಯನ್ನು ಹೋಲುತ್ತಿದ್ದ ಆ ತ್ರಿಪುರಸುಂದರಿಯ ಕ್ಷಣಿಕ ದರ್ಶನ!



# ಹೇಳಿದ್ದೇ ಹೇಳೋ...

- ಅ. ರಾ. ಸೇ.

ಲೇಖಕರೆಲ್ಲರೂ ಒಂದು ವಯೋಮಿತಿ ಮೀರಿದ ಮೇಲೆ ಹೇಳಿದ್ದನ್ನೇ ಹೇಳುತ್ತಾರೆ ಎಂಬೊಂದು ಘನಂದಾರಿ ಹೇಳಿಕೆಯಿದೆ. ಚರಿತ್ರೆಯೂ ಅಷ್ಟೇ, ಪುನರಾವರ್ತನೆಯಾಗುತ್ತಲೇ ಇರುತ್ತದೆ. ಯಾರೂ ಏನನ್ನೂ ಕಲಿಯುವುದಿಲ್ಲ.

ಏಕೆ ಹೀಗೆ?

ಏನೇನನ್ನಾದರೂ ಈ ಪ್ರಶ್ನೆಗೆ ಉತ್ತರವಾಗಿ ಹೇಳುತ್ತಲೇ ಇದ್ದಾರೆ - ಅನೇಕರು.

ಬಹುಶಃ ಈ ಕಾರಣವಿದ್ದೀತೇ? ಪ್ರವರ್ಧಮಾನ ಸ್ಥಿತಿಯಲ್ಲಿರುವ ದೇಶಗಳು, ಜನಗಳು ತಾವು, ತಮ್ಮ ಕಣ್ಣುಗೊಂಬೆ, ಧರೆಯೊಳು ಎನ್ನಯ ಸಮಾನರಾರು ಎಂದು ಮೆರೆಯುತ್ತಲೇ ಅಟ್ಟಹಾಸ ಮಾಡುತ್ತಲೇ ಇರುತ್ತಾರೆ. ಆದರೆ ವಸ್ತುಸ್ಥಿತಿ ಹಾಗಿರುವುದಿಲ್ಲ. ವಿಧಿಯು ಅದನ್ನು ವಿಡಂಬಿಸುತ್ತಲೇ ಇರುತ್ತದೆ. ಎರಡು ಸಾವಿರದ ಒಂದನೇ ಇಸವಿಯ ಸೆಪ್ಟೆಂಬರ್ ಹನ್ನೊಂದು ಎಂದು ಜನ ತಪ್ಪಾಗಿ ಭಾವಿಸುವ ದಿನ...

ಆ ದಿನವು ನಿಜವಾಗಿ ಗತ ಶಾಲಿವಾಹನ ಶಕೆ 1923ನೇ ವಿಷುನಾಮ ಸಂವತ್ಸರದ ಭಾದ್ರಪದ ಕೃಷ್ಣ ಅಷ್ಟಮಿ ದಿನ, ನ್ಯೂಯಾರ್ಕ್ ವಾಷಿಂಗ್‌ಟನ್‌ಗಳಲ್ಲಿ ವಿಧಿ, ವಿಡಂಬನೆ ಮಾಡಿತು.

ಹಾವಿನ ಬಾಯಲ್ಲಿರುವ ಕಪ್ಪೆ, ತನ್ನ ಗತಿಯನ್ನು ಲೆಕ್ಕಿಸದೆ, ಅರಿಯದೆ, ತನ್ನ ಮುಂದಿರುವ ನೊಣವನ್ನು ತಿನ್ನಲು ಹೊಂಚು ಹಾಕುತ್ತಿರುತ್ತದಂತೆ ಅದನ್ನು ಕಂಡು ವಿಧಿ ನಗುತ್ತದಂತೆ.

ಇದು ಯಾರಿಗೂ, ಎಂದೂ ತಿಳಿಯದ ರಹಸ್ಯ. ಇದನ್ನೇ ವೈಷ್ಣವ ಮಾಯೆ ಎನ್ನುತ್ತಾರೆ.

ಇದನ್ನು ಕಂಡು ವಾಜಪೇಯಿ ಮಹಾಶಯರು, ತಿಳಿದೂ ತಿಳಿದೂ, ನಾನು ಕಾಣದ ನನ್ನ ಗಂಡನೇ ಎಂದು ಉಪೇಕ್ಷೆ ಮಾಡದೆ, ವಿಶ್ವದಾದ್ಯಂತ ಭಯೋತ್ಪಾದಕ ಸಂಸ್ಥೆಗಳ ನಿರ್ಮೂಲನಕ್ಕೆ ಇದೇ ಸಮಯ ಎಂದು ಹೇಳಿದರು.

ಅಮೆರಿಕ, ಬ್ರಿಟನ್‌ಗಳಿಗೆ ಬೆಂಬಲ ಸಿಕ್ಕಿತು. ಅವರೇನು ಮಾಡಿದರು, ಭಾರತಕ್ಕೆ ತೊಂದರೆ ಕೊಡುವ ಭಯೋತ್ಪಾದಕರನ್ನು ಬಿಟ್ಟು ಉಳಿದವರೆಲ್ಲರ

ಮೇಲೆ ಯುದ್ಧ ಸಾರಿದರು. ಹಲವಾರು ಸೇಪ ಒಡ್ಡಿದರು. ಅದರಲ್ಲಿ ಮುಖ್ಯವಾದದ್ದು ಇದು. ನಾವೀಗ ಆಫ್ಘಾನಿಸ್ತಾನದ ಮೇಲೆ ಯುದ್ಧ ಮಾಡಬೇಕು. ಅದಕ್ಕೆ ಪಾಕಿಸ್ತಾನವನ್ನು ಬೆಂಬಲಿಸದೆ ಇದ್ದ ದಿನ ಯಾವುದು?

ಇದಕ್ಕೊಂದೇ ಮಾರ್ಗ, ನಮ್ಮ ಸಮಸ್ಯೆಯನ್ನು ನಾವೇ ಬಗೆಹರಿಸಿಕೊಳ್ಳಬೇಕು ಎಂದರು ಒಬ್ಬರು. ಅವರು ಯಾರು? ಕಾಶ್ಮೀರವು ನಮ್ಮದು ಎಂದು ಹೇಳದೆ ಯು (ಡೋಂಟ್)ನೋಗೆ ಆ ಪ್ರಶ್ನೆಯನ್ನೊಯ್ದು ಕಾಶ್ಮೀರ ಸಮಸ್ಯೆ ಹುಟ್ಟು ಹಾಕಿದವರ ಪಕ್ಷಕ್ಕೆ ಸೇರಿದವರು ಅದರ ಮುಖಂಡರು.

ಬೇಕಾದಷ್ಟು ನಗಬಹುದು. ಅದು ನಮ್ಮ ಮುಂದಿನ ನೋವಿನ ಹೆಚ್ಚಳಕ್ಕೆ ಕಾರಣವಾಗುತ್ತದೆ. ಇದಲ್ಲದಿದ್ದರೆ ಇನ್ನಾವುದು ವಿಧಿ ವಿಡಂಬನೆ! ಈ ವಿಷಯವನ್ನು ಪ್ರಸ್ತಾಪ ಮಾಡುವುದಕ್ಕೆ ಒಂದು ಕಾರಣವಿದೆ. ಈ ತಮ್ಮ ನಮ್ರ ಸೇವಕನಾದವನು ಅಥವಾ ಭವದೀಯನು ಈಚೆಗೆ ಒಂದು ಸಭೆಗೆ ಹೋಗಿದ್ದನು. ಅದು ಹಾಸ್ಯವನ್ನು ಕುರಿತ ವಿಚಾರ ಸಂಕಿರಣ. ಭಾಗವಹಿಸುವವರೆಲ್ಲರೂ ಬಾಲಕಿ ಬಾಲಕರು - ಹದಿವಯಸ್ಸಿನವರು. ಅದರಲ್ಲೊಬ್ಬನು ಅಥವಾ ಒಬ್ಬಳು ವಿಡಂಬನೆಯನ್ನು ಸಾರಾಸಗಟಾಗಿ ತಿರಸ್ಕರಿಸಬೇಕು. ತಿಳಿಹಾಸ್ಯ, ವಿನೋದಗಳಲ್ಲೇ ತೊಡಗಬೇಕು ಎಂಬ ಭಯಂಕರ ಕಟ್ಟಪ್ಪಣೆ ಮಾಡಿದನು/ಳು. ನಂತರ ಹಾಸ್ಯಕ್ಕೆ ಉದಾಹರಣೆಯಾಗಿ ರನ್ನನ 'ಜಲದೋಳ್ ಮೀನಿರ್ಪವೋಲ್ ನೀಂಕೊಳೋದೊಳು ಮುಳುಗಿರ್ದಕ್ಕಟಾ ಕೋಡ ಸೇಡಿಂ। ಗೊಳಗಾದೈ...' ಎಂಬ ಪದ್ಯವನ್ನು ಹೇಳಿದನು.

ಕನ್ನಡದ ಅತಿರಥರಲ್ಲೊಬ್ಬರ ನೇತೃತ್ವದಲ್ಲಿ ಸಾಹಿತ್ಯವು 'ಹಾಸ್ಯ'ವನ್ನು ವರ್ಜಿಸಿ 'ವಿನೋದ'ವನ್ನು ಸ್ವೀಕರಿಸಿತು. ಇರಲಿ.

ಭವದೀಯನ ಪಾಳಿ ಬಂದಾಗ ಅವನು ಬಿಗಿದ ಭಾಷಣದಲ್ಲಿ 'ವಿಡಂಬನೆ' ಮತ್ತು ಜಲದೋಳ್ ಇತ್ಯಾದಿ ಪದ್ಯ ವೀರರಸಕ್ಕೆ ಸಂಬಂಧಿಸಿದ್ದು ಹಾಸ್ಯವಲ್ಲ ಎಂಬ ವಿಷಯಗಳ ಪ್ರಸ್ತಾಪ ಬಂತು.

(ನಾನು ಭವದೀಯನಿಗೆ ಸಹಸ್ರಾರು ಬಾರಿ ಬುದ್ಧಿವಾದ ಹೇಳಿದ್ದೇನೆ. ಎಲೋ ಯಾರು ಏನಾದರೂ ಹೇಳಲಿ ತೆಪ್ಪಗಿರು. ನಿನ್ನ ಭಾಷಣದ ಸರದಿ ಬಂದಾಗ 'ಗಣ್ಯರೇ, ಮಾನ್ಯರೇ, ಸಭಿಕರೇ ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ ಎಂದಿದ್ದಾರೆ. ವಂದನೆಗಳು' ಎಂದು ಹೇಳಿ ಕೈಮುಗಿದು ಕುಳಿತುಕೋ ಎಂದು. ಆದರೆ ಭವದೀಯನು ಮೊಂಡಕುಳ)

ಭವದೀಯನು ಭಾಷಣಕ್ಕೆ ಎದ್ದು ನಿಂತು ಹೇಳಿದ್ದೇನೆಂದರೆ, ಜಲದೋಳ್ ಇತ್ಯಾದಿ ಹಾಸ್ಯವಲ್ಲ. ಯಾರೋ ಎಲ್ಲೋ ಎಡವಟ್ಟು ಮಾಡಿಕೊಂಡಿದ್ದಾರೆ.

ಇನ್ನು ವಿಡಂಬನೆಯನ್ನೇ ಬಿಡಬೇಕು ಎನ್ನುವುದು ಒಂದು ತರಹಾ ಸರಿ. ಏಕೆಂದರೆ ಪೋಲಿಜೋಕನ್ನು ಮಾತ್ರಾ ಮಹನೀಯರು ಲಾಲಿಸುತ್ತಾರೆ. ಇನ್ನು ವಿನೋದದಲ್ಲೇ ಇರಬೇಕೆಂದರೆ ಸಾಧ್ಯವಾಗುವುದಿಲ್ಲ, ಮಸಲಾ ಈ ಸನ್ನಿವೇಶ ಗಮನಿಸಿ.

ಒಬ್ಬನು ಒಳ್ಳೆಯ ಮಾನ್ಯನಾದವನು ಇದ್ದಾನೆ ಎಂದಿಟ್ಟುಕೊಳ್ಳೋಣ. ಒಳ್ಳೆಯವನು ಎಂದರೆ ಕೈಲಾಗದವನು. "Nor yet bread unto the wise" ಎಂಬ ಹೇಳಿಕೆ ಗಮನಿಸಿ ಈ ಕಾಲ ಹೇಗಿದೆ?

ಅರಸು ರಾಕ್ಷಸ ಮಂತ್ರಿಯೆಂಬುವ

ಮೊರೆವ ಹುಲಿ ಪರಿವಾರ ಹದ್ದಿನ ನೆರವಿ

...ಉರಿವುರಿವುತಿದೆ ದೇಶ ಎಂದು ಕುಮಾರವ್ಯಾಸ ಹೇಳಿದಷ್ಟು ಕೆಟ್ಟಿಲ್ಲದಿದ್ದರೂ ಬಹಳ ದಾರುಣವಾದ ಕಾಲ.

ಇನ್ನೊಬ್ಬನಿದ್ದಾನೆ, 'ಒಳಗೆ ಕುಜನರು ಹೊರಗೆ ಧರಣೀವಲಯಮಾನ್ಯರು' ಎನ್ನುವವರ ಪೈಕಿ. ಅವನು ದೇಶಕ್ಕೆ ಏನೂ ಮಾಡಿಲ್ಲ. ದೇಶವನ್ನು ಬಡಿದು ಬಳಿದು ತಿನ್ನುತ್ತಿದ್ದಾನೆ ಎಂದಿಟ್ಟುಕೊಳ್ಳೋಣ, ಇರಲಿ ಬಿಡಿ. ಪ್ರಪಂಚ ಎಂದಮೇಲೆ ಎಲ್ಲಾ ಥರದ ಜನಗಳೂ ಇರಬೇಕು. ಆದರೆ ಅವನು ನಮಗೆ, ಅದೂ ಭವದೀಯನಿಗೆ 'ಕಳಬೇಡ ಕೊಲಬೇಡ, ಹುಸಿಯ ನುಡಿಯಲುಬೇಡ' ಎನ್ನುತ್ತಾನೆ. ಅವನ ಭಾಷಣ, ಹೆಡ್ ಲೈನಿನಲ್ಲಿ ಐದು ಕಾಲಂನಲ್ಲಿ ಪತ್ರಿಕೆಯಲ್ಲಿ ಬರುತ್ತದೆ. ಆಗ ಹೊಟ್ಟೆಯುರಿ ಬೀಳುತ್ತದೆ. ಕೈಲಾಗುವುದಿಲ್ಲ, ಆಗ ವಿಡಂಬನೆಗೆ ಮೊರೆ ಹೋಗಲೇಬೇಕಾಗುತ್ತದೆ.

ನೋಡಿ ಭವದೀಯನ ಭಾಷಣ ಹೆಡ್‌ಲೈನ್ ಕೆಳಗೆ ಐದು ಕಾಲಂನಲ್ಲಿ ಅಚ್ಚಾಯಿತು.

ಹೊಟ್ಟೆಯುರಿಯಿಂದ ವಿಡಂಬನೆ ಎಂದು ಹೆಡ್‌ಲೈನ್. ಭವದೀಯನ ಮಿತ್ರರು ನೀನು ಹೊಟ್ಟೆಕಿಚ್ಚಿನ ಮೊಟ್ಟೆಕೋಳಿ ಎಂದು ಹಂಗಿಸಿದರು. ಹಾಸ್ಯ, ವಿಡಂಬನೆ ಬಗ್ಗೆ ಯಾರು ಏನಾದರೂ ಹೇಳಲಿ, ಇನ್ನು ಮುಂದೆ ಸಭೆಗಳಲ್ಲಿ ಸರ್ವರಿಗೂ ನಮಸ್ಕಾರ, ಕಳಬೇಡ, ಕೊಲಬೇಡ, ಹುಸಿಯನುಡಿಯಲುಬೇಡ, ವಂದನೆಗಳು ಎಂದು ಮಾತ್ರ ಹೇಳಲು ಭವದೀಯನು ನಿರ್ಧರಿಸಿದ್ದಾನೆ.

# ಪ್ರಸ್ತುತ

ಈ ಲೇಖನದಲ್ಲಿ ಪ್ರಸ್ತುತವೆಂಬ ಉಪ ಶೀರ್ಷಿಕೆಯನ್ನು ಆರಂಭಿಸಲು ಭವದೀಯನಿಗೆ ಅಮಿತ ಆನಂದವಾಗುತ್ತಿದೆ. ಈ ಶಬ್ದವನ್ನು ಎಷ್ಟು ಬಾರಿ ಕೇಳಿದ್ದೇನೆಂಬುದನ್ನು ಅಂಬಿಕಾತನಯದತ್ತರ ವರವಾಣಿಯೇ ನಿರ್ಧರಿಸ ಬಲ್ಲುದು. ಈ ಶಬ್ದದ ಅರ್ಥವೇನೆಂಬುದೂ ನನಗೆ ಗೊತ್ತಿಲ್ಲ. ಭಾಷೆಯನ್ನು ಕಲಿಯುವಾಗ ಶಬ್ದಗಳ ಅರ್ಥವನ್ನು ನಿಘಂಟಿನಲ್ಲಿ ನೋಡಿ ಯಾರೂ ಕಲಿಯುವುದಿಲ್ಲ.

ಈ ಶಬ್ದವನ್ನು ನಾನು ಮತ್ತೆ ಮತ್ತೆ ಕೇಳಲು ಕಾರಣನಾದವನು ನನ್ನ ವಿಶ್ವಾಸವಿಲ್ಲದ ಸ್ನೇಹವನ್ನು ಗಳಿಸಿಕೊಂಡಿರುವ ವ್ಯಕ್ತಿ - ಮುರಾರಿ.

ಇವನು ಲಾರೆಲ್ ಪ್ರಶಸ್ತಿ ವಿಜೇತ - ಲಾರೆಲ್ ಪ್ರಶಸ್ತಿ ಎನ್ನುವುದು ಮುಗಿಲು ಹಳ್ಳಿಯಲ್ಲಿ ನೊಬೆಲ್, ಜ್ಞಾನಪೀಠ ಪ್ರಶಸ್ತಿಗಳಿಗೆ ಸರಿಸಮಾನ ಪ್ರಶಸ್ತಿ.

ಅದು ಯಾವ ಗಳಿಗೆಯೋ ಏನೋ, ಅದೇಕೆ ಹಾಗಾಯಿತೋ! ಮುಗಿಲುಹಳ್ಳಿ ಅಥೇನಿಯಂನ ಮುಖ್ಯಸ್ಥ ದುಬ್ಬೀರ್ಗ, ನನ್ನನ್ನು ತನ್ನ ಆಫೀಸಿಗೆ ಕರೆಸಿ 'ಈ ವರ್ಷ, ಹಿಂದಿನ ವರ್ಷ, ಅದರ ಹಿಂದಿನ ವರ್ಷದ ಲಾರೆಲ್ ಪ್ರಶಸ್ತಿಯನ್ನು ಯಾರಿಗೂ ಕೊಟ್ಟಿಲ್ಲ, ವಾರ್ಷಿಕ ಬಜೆಟ್ ಅಲಾಟ್‌ಮೆಂಟ್ ಇನ್ನೆರಡು ತಿಂಗಳಿಗೆ ಕ್ಲೋಸಾಗಲಿದೆ. ಲಾರೆಲ್ ಪ್ರಶಸ್ತಿ ಸಾಹಿತ್ಯಕ್ಕೆ ಸಂಬಂಧಿಸಿದ್ದು. ಯಾರಿಗೆ ಕೊಡೋಣ? ಎಂದು ಕೇಳಿದ. ಹೇಗಿದೆ; ಆಧುನಿಕ ಪ್ರಗತಿ?

ಹಿಂದೆ ಯಾರಾದರೂ ರಾಜ, ಔರಸ ಪುತ್ರರಿಲ್ಲದೆ ಸತ್ತರೆ, ಅವನ ಇತರ ಪುತ್ರರು ನಾನೇ ರಾಜನಾಗಬೇಕೆಂದು ಕೈಕೈ ಮಿಲಾಯಿಸಿದಾಗ, ಮಂತ್ರಿಗಳು ಪಟ್ಟದಾನೆಯನ್ನು ಕರೆದು ಪೂಜಿಸಿ ಹಾರವೊಂದನ್ನು ಸೊಂಡಲಿಗೆ ಕೊಡುತ್ತಿದ್ದರಂತೆ. ಅದು ಹಾರವನ್ನು ಹಾಕಿದವನಿಗೆ ಪಟ್ಟಾಭಿಷೇಕವಂತೆ.

ಈಗ ರಾಜರಿಲ್ಲ. ಆದರೂ ಇಸ್ಪೇಟಿನ ರಾಜರು ಇದ್ದಾರೆ. ಪಟ್ಟದಾನೆಗಳಿಲ್ಲ. ಪಟ್ಟದ ಕೋಣಗಳೂ ಇಲ್ಲ ನಾನು ಹೇಳುವವನು, ದುಬ್ಬೀರ್ಗ ಕೇಳುವವನು. ಆಗ ಮುಗಿಲು ಹಳ್ಳಿಯಲ್ಲಿ ಬರಹಗಾರರೇ ಇರಲಿಲ್ಲ ಭವದೀಯನನ್ನು ಬಿಟ್ಟು, ಈಗಲೂ ಇಲ್ಲ, ಆದರೆ ನಾಮುಂದು ತಾಮುಂದು ಅಂತ ಬರುತ್ತಾರೆ - ನಾವು ಸಾಹಿತಿಗಳು ಎಂದು.

ನಾನು ಬಹಳ ಚಿಂತಿಸಿದೆ, ಮುರಾರಿ ಮುಗಿಲು ಹಳ್ಳಿಗೆ ಅಮದಾದ ಪ್ರತಿಭೆ, ಕ್ರಾಂತಿಕಾರ. ಅವರನ್ನು ಇವರನ್ನು ಕದ್ದು ಕತೆ ಬರೆಯುತ್ತಿದ್ದ. ಕೃತಿಚೌರ್ಯವೇ ಇಲ್ಲ ಎಂದು ವಾದಿಸಿದ ಮಹಾನುಭಾವ. ನನಗೆ ಆಗಾಗ, ದೋಸೆ ಕಾಫಿ ಕೊಡಿಸುತ್ತಿದ್ದ. ಪಾರ್ಟಿಗೆ ಕರೆಯುತ್ತಿದ್ದ. ಪಾರ್ಟಿಗಳಲ್ಲಿ ಎರಡು ವಿಧ 1. ಪಾರ್ಟಿ,

2. ರಾಜಕೀಯಪಾರ್ಟಿ, ಎರಡು ನನಗೆ ವರ್ಜ್ಯ, ದೋಸೆಯೇ ಸಾಕು, ಮೆಣಸಿನಕಾಯಿ ಕೊಡಿಸಿದರೆ ಇನ್ನೂ ಉತ್ತಮ. ಮೇಲೆ ಕಾಫಿ ನೀರೋ ಚಾ ನೀರೋ ಸಾಕು.

ದುಬ್ಬೀರ್ಗನಿಗೆ 'ಇವತ್ತು ಸಂಜೆ ಹೇಳುತ್ತೇನೆ' ಎಂದೆ. ಸಂಜೆ ಮುರಾರಿ ಸಿಕ್ಕಿದ. ಪಾರ್ಟಿಗೆ ಹೊರಟಿದ್ದ. ಅವನು ಎರಡೂ ವಿಧದ ಪಾರ್ಟಿಗಳನ್ನೂ ಮಾನ್ಯ.

'ಮುರಾರಿ, ಮೆಣ್ಸಿನ ಕಾಯಿ ಕೊಡಸ್ತೀಯೇನಲೇ' ಎಂದ ಅವನು ಕೊಡಿಸಿಯೇಬಿಟ್ಟ, ಲಾರೆಲ್ ಪ್ರಶಸ್ತಿ ಅವನಿಗೆ ಸಿಕ್ಕೇಬಿಟ್ಟಿತು.

ಮುರಾರಿ ಭಾರೀಕುಳ, ಸಮಾಜವಾದಿಗಳಲ್ಲಿ ಅವನು ಅಗ್ರಗಣ್ಯ. ಮುಗಿಲುಪಳ್ಳಿ, ಹೊರವಲಯದಲ್ಲಿ ಭಾರೀ ಬಂಗಲೆ ಕಟ್ಟಿಸಿದ್ದಾನೆ. ಪಾರಿನ್ನಿಗೆ ಹೋಗಿ ಬಂದಿದ್ದಾನೆ.

ನೀವೊಂದು ಗೀತೆಯನ್ನು ಕೇಳಿರಬಹುದು. 'ಬಾನಲ್ಲು ನೀನೇ ಬಯಲಲ್ಲು ನೀನೇ, ನನ್ನಲ್ಲು ನೀನೇ ನಿನ್ನಲ್ಲು ನೀನೇ' ಅಂತ. ಅದು ಮುರಾರಿಯನ್ನೇ ಕುರಿತದ್ದಿರಬೇಕು.

ಟೀವಿಯಲ್ಲೂ ಅವನೇ, ರೇಡಿಯೋದಲ್ಲೂ ಅವನೇ, ಪೇಪರುಗಳಲ್ಲೂ ಅವನೇ, ಮೀಟಿಂಗುಗಳಲ್ಲೂ ಅವನೇ, ಬಾರಲ್ಲೂ ಅವನೇ, ಬೀರಲ್ಲೂ ಅವನೇ ಎಲ್ಲೆಲ್ಲೂ ಅವನೇ!

ಅವನು ಗುಡಿಗೆ ಹೋಗುವುದಿಲ್ಲವಲ್ಲಾ ಎಂದೀರಿ. ಸಂಕಟ ಬಂದಾಗ ಅವನು ವೆಂಕಟರಮಣನ ಮೊರೆ ಹೊಕ್ಕಿದ್ದಾನೆ. ಮಠಕ್ಕೆ ಹೋಗುವುದಿಲ್ಲವಲ್ಲಾ ಎಂದೀರಿ. ಅವನ ಬಂಗಲೆಯಲ್ಲಿ ದೆವ್ವ ಸೇರಿಕೊಂಡಾಗ ಮಠದ, ಅದೂ ಅವನ ಉಪ ಪಂಗಡದ ಮಠದ ಸ್ವಾಮಿಗಳ ಪಾದಕ್ಕೆ ಬಿದ್ದು ಹೋಮ ಹವನ ಮಾಡಿಸಿದ್ದಾನೆ. ಆದ್ದರಿಂದ ಎಲ್ಲೆಲ್ಲೂ ಅವನೇ ಎಂದು ನಾವು ಹೇಳಿದ್ದು ಸರಿ.

ಈಗ ಅವನಿಗೆ 'ಪ್ರಸ್ತುತ' ರೋಗ ಬಂದ ವಿಷಯ. ಅವನು ಹಿಂದೆ ಕಾರ್ಲ್‌ಮಾರ್ಕ್ಸ್ ವಿಚಾರಗಳು ಇಂದಿಗೂ ಪ್ರಸ್ತುತ ಎಂದು ಹೇಳಿದ್ದ ವರದಿ ಓದಿದ್ದೆ. ಆಮೇಲೆ ಲೋಹಿಯಾ ವಿಚಾರಧಾರೆ ಪ್ರಸ್ತುತ ಎಂದ. ನಂತರ ಜೆ.ಪಿ. ವಿಚಾರಧಾರೆ ಪ್ರಸ್ತುತ ಎಂದ. ಎಲ್ಲಾ ಪೇಪರುಗಳ ಹೆಡ್‌ಲೈನಿನಲ್ಲಿ ಬಂದವು, ದುರ್ದರ್ಶನಗಳಲ್ಲಿ ಟೆಲಿಕ್ಯಾಸ್ಟ್ ಆದವು.

ನಂತರ 'ಉಪನಿಷತ್ತುಗಳ ವಿಚಾರಧಾರೆ ಇಂದಿಗೂ ಪ್ರಸ್ತುತ' ಎಂದ. ಮತ್ತೆ 'ದೈವಭಕ್ತಿ ಇಂದಿಗೂ ಪ್ರಸ್ತುತ' ಎಂದ. ಬಳಿಕ ಮಹಾತ್ಮಾಗಾಂಧಿ ವಿಚಾರ ಧಾರೆಗಳು ಇಂದಿಗೂ ಪ್ರಸ್ತುತ ಎಂದ.

ಮುಗಿಲು ಹಳ್ಳಿಗೆ ಬಂದ ಮೇಲೆ ಮುಗಿಲು ಹಳ್ಳಿಯ ಬಿಗ್‌ಬಾಸ್ ಅಣ್ಣಾವರ ವಿಚಾರಗಳು ಇಂದಿಗೂ ಪ್ರಸ್ತುತ ಎಂದ ನಂತರ ವಿವೇಕಾನಂದರು, ಬಸವೇಶ್ವರರು, ಬುದ್ಧ ಅಂಬೇಡ್ಕರ್ ಇವರೆಲ್ಲರ ವಿಚಾರಧಾರೆಗಳು 'ಇಂದಿಗೂ ಪ್ರಸ್ತುತ' ಗಳಾದವು.

ಈಚೆಗೆ ಅವನು 'ಪರಿಸರ ನಾಶ ಇಂದಿಗೂ ಪ್ರಸ್ತುತ' ಎಂದು ಹೇಳಿದ್ದು ಪೇಪರಿನಲ್ಲಿ ಬಂತು. ಪರಿಸರ ಪ್ರಿಯರು ಮುಗಿಲುಹಳ್ಳಿ ಬಂದ್ ಮಾಡಿಸಿದರು. ಆಗ ಅವನು 'ಪರಿಸರ ನಾಶವನ್ನು ತಡೆಗಟ್ಟುವುದು ಇಂದು ಪ್ರಸ್ತುತ' ಎಂದು ಹೇಳಿದ್ದು ತಪ್ಪಾಗಿ ಪ್ರಕಟವಾಗಿದೆ ಎಂದು ಹೇಳಿಕೆ ಕೊಟ್ಟ.

ಮುಂದಿನ ತಿಂಗಳಿಡೀ ಮುರಾರಿಯ ಭಾಷಣಗಳಿವೆ. ಸಂತೋಷ. ನಮಗೆ ಭಯವೇಕೆ ಎಂದರೆ ಯಾರ ವಿಚಾರಧಾರೆಗಳು ಪ್ರಸ್ತುತವಾಗುವುವೋ ಏನೋ? ಮುಷರಫ್, ಒಸಾಮ, ಬುಷ್, ಬ್ಲೇರ್, ಖಲೇದಾ, ವುಲ್ಫ್‌ಗ್ಯಾಂಗ್ ಕಟೇರಿ, ಸಾರ್ತ್ರೆ, ಕರ್ಕ್‌ಗಾರ್ಡ್, ಫರ್ನಾಂಡಿಸ್, ಜಯಲಲಿತಾ, ಲಾಲೂ, ಚಂದ್ರಿಕಾ, ಪ್ರಭಾಕರನ್, ಆದಿಸದ ವಿಚಾರಿಗಳನ್ನು ಸರಿಯಾಗಿ ಊಹಿಸುವವರಿಗೆ ಮುಗಿಲುಹಳ್ಳಿ ವಿಚಾರವೇದಿಕೆ ಸೂಕ್ತ ಬಹುಮಾನಗಳನ್ನು ಕೊಡುವುದಾಗಿ ಪ್ರಕಟಿಸಲಾಗಿದೆಯಂತೆ.

---

ಹಿಂದಿನಿಂದ: ಪ್ರಸ್ತುತ ಎಂದರೆ ಸದ್ಯದ, ತತ್ಕಾಲದ, ಮಾಡಿದ ಇತ್ಯಾದಿ ಹತ್ತಾರು ಅರ್ಥಗಳಿವೆಯಂತೆ. ಕೃಪೆ: w.w.w ಫಿಯರ್ ಫೈರ್.ಕಾಮ್

**ಸಮರ – ಸ**

ಏನೂಂದ್ರೆ
ಕೋಪ ತಾಪ
ಸಿಟ್ಟು ಸೆಡವು
ಪ್ರೀತಿ ವಿಶ್ವಾಸ
ದುಡಿಮೆಗಳಿಕೆ ಎಲ್ಲಾ
ನಿಮ್ಮೊಬ್ರದೇ ಅಲ್ಲ
ಮನಾಪಲಿ ;
ಜೀವನ ಒಂದು
ಸಮರಸ
ಸಮರ SAW

– **ಎಚ್. ವಿ. ವೆಂಕಟಸುಬ್ಬಯ್ಯ**

# ಹಿತ್ತಾಳೇ ಮುದ್ರೆ

– ಎಂ.ಎನ್.ಕೆ.

ನಾನು ಈಗ ಹೇಳ್ತಿರೋದು ಐವತ್ತರ ದಶಕದ ಮಾತು. ''ಯಾವ್ದೋ ಓಬೀರಾಯನ ಕಾಲದ ಕಂತೆ ಬಿಚ್ಚ್ತಾ ಇದಾನೆ, ಬರೀ ಹಳೇ ಪುರಾಣಾ'' ಅನ್ಕೊಳ್ಳಿ, ನಂಗೇನೂ ಪರವಾಗಿಲ್ಲ.

ಆಗ ನಾನು ಕಾಲೇಜಿನಲ್ಲಿ ಓದ್ತಿದ್ದೆ. ನನಗೆ ತಿಂಗಳ ಕಾಲೇಜ್ ಫೀಸೊಂದ್ಬಿಟ್ಟು ಬೇರೇನು ಪಾಕೆಟ್ ಮನೀ - ಗೀಕೆಟ್ ಮನಿ ಒಂದೂ ಕೊಡ್ತಿರಲಿಲ್ಲ. (ಕೊಡೋಕೆ ಅಲ್ಲೇನೂ ಇರ್ತಾನೂ ಇರಲಿಲ್ಲ, ಅದೇ ಬೇರೇ ಮಾತೂ). ನಮ್ಮಮ್ಮ ಕೈಲಿ ಸ್ವಲ್ಪ ದುಡ್ಡು ಕೊಟ್ಟು ''ಹೋಗೋ. ರೇಶನ್ ಕಾರ್ಡ್ ತೊಗೊಂಡು ಸೊಸೈಟೀಲಿ ರೇಶನ್ ಕೊಡ್ತಿದ್ದಾರಂತೆ, ತೊಗೊಂಬಾ'' ಅಂದಾಗ ಹೋಗಿ, ಕ್ಯೂ ನಿಂತು ಕೊಟ್ಟ ರೇಶನ್ ತೊಗೊಂಡು ಮಿಕ್ಕಿದ ಚಿಲ್ಲರೇಲಿ ಸ್ವಲ್ಪ ಜೇಬಿಗಿಳಿಸಿದರೆ ಅದೇ ನನಗೆ ಪಾಕೆಟ್ ಮನಿ. ಪಾಕೆಟ್ ಅಂದರೆ ಶರ್ಟಿನ ಪಾಕೆಟ್. ಪರ್ಸೂ ಗಿರ್ಸೂ ಒಂದೂ ನೋಡೇ ಇರಲಿಲ್ಲ.

ಸಂಜೆಯಾದರೆ ಫ್ರೆಂಡ್ಸ್ ಜೊತೆ ತಿರುಗಾಡೋದೇ ಕೆಲಸ. ಹೋಗ್ತಾ ಹೋಗ್ತಾ ನಮ್ಮ ಕಾಲುಗಳು ಆಟೋಮಾಟಿಕ್ ಆಗಿ ನಮ್ಮನ್ನ ಭಟ್ಟರ ಶ್ರೀ ಲಕ್ಷ್ಮೀ ವಿಲಾಸ ಹೋಟೆಲ್ ಹತ್ತಿರಾನೇ ಕರ್ಕೊಂಡು ಹೋಗ್ತಿದ್ವು. ಅಲ್ಲಿ ನಾವು ಹೋದ ಕೂಡಲೆ ಮಾಣಿ ಎರಡೋ ಮೂರೋ ಕಾಫಿ ತಂದಿಟ್ಟು, ಖಾಲೀ ಲೋಟಾ ಟೇಬಲ್ ಮೇಲೆ ಕುಕ್ಕಿ ಭಟ್ಟರಿಗೆ ಕೇಳಿಸೋ ಹಾಗೆ ''ಐದು ಜನ. ತ್ರೀ ಬೈ ಫೈವ್ ಕಾಫೀ'' ಅಂತ ಕೂಗ್ತಿದ್ದ. ನಾವು ನಮ್ಮ ಚಿಲ್ಲರೇಗಳನ್ನೆಲ್ಲ ಸರಿ ಮಾಡ್ಕೊಂಡು ಭಟ್ಟರಿಗೆ ಕೊಡಬೇಕು. ಇದು ಆಲ್ಮೋಸ್ಟ್ ದಿನಂಪ್ರತಿ ರೊಟೀನು.

ಡಾ|| ಹೆಚ್. ನರಸಿಂಹ ಅಯ್ಯನವರ ಆತ್ಮ ಕಥೇಲಿ ಓದಿದ್ದು ಜ್ಞಾಪಕಕ್ಕೆ ಬರುತ್ತೆ. ಅವರು ವಿದ್ಯಾರ್ಥಿ ಆಗಿದ್ದಾಗ ಆರು ಕಾಸು ಕೂಡಿ ಹಾಕಿಕೊಂಡು ಹೊಟೇಲ್ಗೆ ಹೋಗಿ ಎರಡು ಖಾಲೀ ದೋಸೆ, ನಾಲ್ಕು ಬಟ್ಟಲು ಚಟ್ನೀ ತಿಂದು ಹೊರಗೆ ಬರುವಾಗ ಮಾಣೀ ''ಒಬ್ಬರು ಎರಡು ಖಾಲೀ ದೋಸೆ. ಕಾಫೀ ಇಲ್ಲಾ'' ಅಂತ ತುಂಬಿದ ಹೊಟೇಲಲ್ಲಿ ಎಲ್ಲರಿಗೂ ಕೇಳಿಸುವಂತೆ ಕೂಗ್ತಿದ್ದನಂತೆ.'' ''ಬಹಳಾ ಎಂಬರಾಸ್ಸಿಂಗ್ ಅದು'' ಅಂತ ಬರೆದಿದ್ದಾರೆ ಡಾಕ್ಟರ್ ಸಾಹೇಬರು.

ಒಂದ್ಸಲ ನನ್ನ ದೊಡ್ಡಪ್ಪ ''ಲೋ ಹೋಗಿ ರಾಯರ ಮಠದಲ್ಲಿ ಆಚಾರ್ರು ಹಿತ್ತಾಳೇ ಮುದ್ರೆಗಳನ್ನ ಕೊಡ್ತಾರೆ. ತೊಗೊಂಬಾ'' ಅಂದರು. ಹೋಗಿ ಅವನ್ನ

ನನ್ನ ಶರ್ಟ್ ಜೇಬಿನಲ್ಲಿ ಹಾಕ್ಕೊಂಡು ಬರೋವಾಗ ಫ್ರೆಂಡ್ಸ್ ಸಿಕ್ಕಿದರು. ಅವರ ಕಣ್ಣೆಲ್ಲಾ ನನ್ನ ಜೇಬಿನ ಮೇಲೇ ಇತ್ತು. ''ಬಾರೋ. ಹಸಿವಾಗ್ತಿದೆ. ದೋಸೇ ತಿನ್ನೋಣಾ'' ಅಂದಾಗ ನನಗೆ ಖುಷೀ ಆಯ್ತು. ಭಟ್ಟರ ಹೋಟೆಲ್ ದೋಸೇ ಬಿಟ್ಟೀ ಸಿಗೋವಾಗ ಯಾರಿಗೆ ಬೇಡ? ಹೋಗಿ ಗಡತ್ತಾಗಿ ಟೂ ಬೈ ತ್ರೀ ದೋಸೇ, ಟೂ ಬೈತ್ರೀ ಬಾದಾಮೀ ಹಾಲು ಕುಡಿದು ಬರೋವಾಗ ಮಾಣಿ ದುಡ್ಡೆಷ್ಟೂಂತ ಕೂಗ್ದ. ಅವರು ಕೊಡ್ತಾರೇಂತ ನಾನು, ನಾನು ಕೊಡ್ತೀನಿಂದ ಅವರು ಕಾದೆವು. ಕೊನೆಗೆ ನನ್ನ ಫ್ರೆಂಡ್ ರಾಘು ''ಬಿಲ್ ಕೊಡೋ. ಈ ಸಲ ನಿನ್ನ ಟರ್ನ್ ಅಲ್ವೇನೋ'' ಅಂದಾಗ ನಾನು ದುಡ್ಡಿಲ್ಲಾ ಅಂದೆ. ''ಅಲ್ವೋ ನಿನ್ನ ಜೇಬು ಅಷ್ಟು ತುಂಬಿದೆ. ಅಲ್ಲಿರೋದೇನು'' ಅಂದಾಗ ನಾನು ಹಿತ್ತಾಳೀ ಮುದ್ರೆಗಳನ್ನ ತೋರಿಸಿದೆ.



''ಈ ಮುದ್ರೆಗಳನ್ನ ಇಲ್ಲೇ ಇಟ್ಕೊಂಡಿರಿ. ಮನೇಗೆ ಹೋಗಿ ದುಡ್ಡು ತರ್ತೀನಿ'' ಅಂದರೆ ಭಟ್ಟರು ಬಿಲ್‌ಕುಲ್ ಒಪ್ಪಲಿಲ್ಲ. ''ಇಬ್ಬರು ಇಲ್ಲೇ ನಿಂತಿರಿ. ಒಬ್ಬ ಮನೇಗೆ ಹೋಗಿ ದುಡ್ಡು ತರಲಿ'' ಅಂದರು. ನನ್ನ ಟರ್ನ್ ಆದ್ದರಿಂದ ಮನೇಗೆ ಓಡಿ ಹೋಗಿ ಅಮ್ಮನ ಹತ್ತಿರ ದುಡ್ಡು ಕೇಳುವಾಗ ನಮ್ಮಜ್ಜಿ ಅಲ್ಲೇ ಮಂಚದ ಮೇಲೆ ಕೂತು ಹೂ ಬತ್ತೀ ಹೊಸೀತಿದ್ರು. ಕಣ್ಣು ಮಂಜಾದರೂ ಕಿವೀ ಬಲು ಚುರುಕು. ''ಯಾಕಂತೇ ಅವನಿಗೆ ದುಡ್ಡು'' ಅಂತ ಕೂತ್ ಜಾಗದಿಂದ್ಲೆ ಕೂಗಿದರು. ಅಮ್ಮ ''ಅದೇನೋ ಹೋಟ್ಲಿಗೆ ಕೊಡಬೇಕಂತೆ'' ಅಂದಾಗ, ''ಹೋಟ್ಲೂ? ಅಲ್ಲೇಕೆ ಹೋದ ಇವ್ನು. ಸ್ಕೂಲಿಂದ್ ಬಂದಾಗ ಗಡದ್ದಾಗಿ ನೀನು

ಕೊಟ್ಟ ಮೂರು ತಪ್ಪಲೇ ರೊಟ್ಟಿ ತಿಂದ. ಲೋಟದ ತುಂಬಾ ಕಾಫಿ ಬೇರೇ ಕೊಟ್ಟೆ. ಮತ್ಯಾಕಂತೆ ಹೋಟ್ಲಿಗೆ ಹೋಗಿದ್ದೂ. ಅವನ್ದೇನು ಹೊಟ್ಟೇನೋ ಇಲ್ಲಾ ಗುಡಾಣಾನೋ? ದುಡ್ಡೂ ಕಾಸೂ ಕೊಟ್ಟು ನೀನೇ ಅವನ್ನ ಕೆಡಿಸ್ತಾ ಇರೋದು. ಅವರಪ್ಪ ರಾತ್ರಿ ಆಫೀಸಿಂದ ಬಂದ್ಮೇಲೆ ಹೇಳ್ತೀನ್ ತಡೀ'' ಅಂತ ಸೊಸೆ, ಮೊಮ್ಮಗ ಇಬ್ಬರ ಮೇಲೂ ಅಮ್ಮ ರಿಸಿಕೊಂಡ್ರು, ಕೂತ ಜಾಗದಿಂದ್ಲೇ. ಹಾಗೂ ಹೀಗೂ ಮಾಡಿ ಅಮ್ಮನಿಂದ ದುಡ್ಡು ಪೀಕಿಸಿ ಓಡಿ ಹೋಗಿ ನನ್ನ ಫ್ರೆಂಡ್ಸ್‌ನ ಭಟ್ಟರ ಕಸ್ಟಡಿಯಿಂದ ಬಿಡಿಸಿಕೊಂಡು ಬಂದೆ.

ಒಪ್ತೀರ್ರಾನೆ ಇದೊಂದು ಫಸ್ಟ್‌ಕ್ಲಾಸ್ ಪೇಚಿನ ಪ್ರಸಂಗಾಂತ? ಹಿತ್ತಾಳೆ ಮುದ್ರೇನ ಚಿಲ್ಲರೇ ಕಾಸೂಂತ ಕನ್ಫ್ಯೂಸ್ ಮಾಡ್ಕೊಂಡು ಪಟ್ಟ ಪಾಡು ಅಷ್ಟಿಷ್ಟಲ್ಲ.

ಐವತ್ತು ವರ್ಷ ಕಳೀತು. ಆ ಹೋಟೆಲ್ ಹಾಗೇ ಇದೆ. ಆ ನನ್ನ ಫ್ರೆಂಡ್ಸೂ ಸಿಕ್ತಿರ್ತಾರೆ. ''ಲೋ ಹೋಗೋಣಾ ಬಾರೋ ಭಟ್ಟರ ಹೋಟೆಲ್ಗೆ. ಈ ಸಾರಿ ಸರಿಯಾದ ಕಾಸು ತೊಗೊಂಬಾ. ಆ ದೊಡ್ಡಪ್ಪನ ಹಿತ್ತಾಳೀ ಮುದ್ರೆಗಳನ್ನ ಮಾತ್ರ ಜೇಬಿನಲ್ಲಿ ಹಾಕ್ಕೊಂಡು ಬರಬೇಡಾ'' ಅಂತ ಹಾಸ್ಯ ಬೇರೆ ಅವರಿಗೆ.

ಸರಿಯಾದ ಕಾಸೇನೋ ಬರೋ ಪೆನ್ಷನ್ ಅಲ್ಲಿ ಅಡ್ಜಸ್ಟ್ ಮಾಡ್ಕೋಬೋದು. ಆದರೆ ಭಟ್ಟರ ಹೋಟೆಲ್ ಮಸಾಲ್ ದೋಸೇ ತಿನ್ನೋಕೆ ಹಲ್ಲಿಲ್ಲ. ಕಷ್ಟ ಪಟ್ಕೊಂಡು ನಾಲಿಗೇಲೇ ಚಪ್ಪರಿಸಿಕೊಂಡು ತಿಂದ್ರೇನೂ ಸರಿಯಾಗಿ ಜೀರ್ಣಾನು ಆಗುಲ್ಲ.

ಜೀರ್ಣ ಆಗೋ ಕಾಲದಾಗೆ ದುಡ್ಡಿರಲಿಲ್ಲಾ. ದುಡ್ಡಿರೋ ಕಾಲಕ್ಕೆ ಜೀರ್ಣ ಶಕ್ತಿ ಇಲ್ಲ. ಅಂತೂ ಇಂತೂ ನನ್ನ ಹೊಟ್ಟೇಗೆ ಭಟ್ಟರ ಹೋಟೆಲ್ ದೋಸೇ ಇಲ್ಲಾ.

**ಉತ್ತರ**

ನಾ ಎತ್ತರ, ನೀ ಎತ್ತರ
ವಾದಕೆಲ್ಲಿದೆ ಉತ್ತರ
ನೋಡಬಾರದೆ ವಿಶ್ವದೆಲ್ಲೆಡೆ
ಬೆಳೆದು ಹಬ್ಬಿದ ಬಿತ್ತರ

– ಮರು ಬಿರಾದಾರ

ಶುಭಾಶಯಗಳೊಡನೆ



## ಎಸ್. ಆರ್. ರಾಮಚಂದ್ರನ್

ಮತ್ತು

## ಎಸ್. ಎ. ರಾಮು

# ಕೊರವಂಜಿ ಅಪರಂಜಿ ಟ್ರಸ್ಟ್

ಉತ್ತಮ ಅಭಿರುಚಿಯ ನಗೆ ಸಾಹಿತ್ಯವನ್ನು
ಗುರುತಿಸಿ ಬೆಳಕಿಗೆ ತರುವುದು ನಮ್ಮ ಧ್ಯೇಯ

| | |
|---|---|
| ಮಧುಚಂದ್ರ | ಎಂ. ಶಿವಕುಮಾರ್ |
| ಯಾರೋ | ಓಂಪ್ರಕಾಶ್ |
| ನಲಿವುಗರಿ | ಕಮಲಾ ರಾಮಸ್ವಾಮಿ |
| ನೀತಿಯ ಕಥೆಗಳು | ರಾ. ಶಿ. |
| ಬೆಸ್ಟ್ ಆಫ್ ಕೊರವಂಜಿ (ಎರಡನೇ ಕಂತು) | ಸಂಕಲನ |

ಪ್ರತಿಗಳಿಗೆ ಇಲ್ಲಿ ಸಂಪರ್ಕಿಸಿರಿ
**ಕೊರವಂಜಿ ಅಪರಂಜಿ ಟ್ರಸ್ಟ್**
ನಂ. 36, 6ನೇ ಮುಖ್ಯ ರಸ್ತೆ
ಮಲ್ಲೇಶ್ವರಂ, ಬೆಂಗಳೂರು 560 003
ದೂರವಾಣಿ : 3345259
ಈಮೇಯ್ಲ್ : *aparanji@hotmail.com*

ಶುಭಾಶಯಗಳೊಡನೆ

ಪೂರ್ಣಿಮ ರಘು ಗೌಡ

ಮತ್ತು

ಶ್ರೀಹರಿ ಕಡಾಂಬಿ



ಶ್ರೀಮತಿ ಶಾಂತಾ ರಘು

ಮತ್ತು

ಡಾ|| ಸಿ.ಆರ್. ರಘು

ಇವರ ಸವಿನೆನಪಿನ ಕುರುಹಾಗಿ

ಶುಭಾಶಯಗಳೊಡನೆ

# ಫೆನ್‌ಫೆ
# ಮೆಟಲರ್ಜಿಕಲ್ಸ್

ಅಲ್ಯೂಮಿನಿಯಂ ಧಾತುಗಳ
ಉತ್ಕೃಷ್ಟ ಗುಣಮಟ್ಟದ ಎರಕ ತಯಾರಕರು
(ಕೆಲವು ಗ್ರಾಂಗಳಿಂದ ಹಿಡಿದು
400 ಕೆ.ಜಿ. ತೂಕದ ವರಗಿನ ಎರಕ)



# FENFE METALLURGICALS

*No.2, Sy. No. 20-A, Uttarahalli,*
*Bangalroe - 560 061*
*Ph : 6661461 Fax : 6660613*
*e-mail : fenmet@ vsnl.com*

Printed by V.R. NATH for the Publisher KORAVANJI APARANJI TRUST. Published by KORAVANJI APARANJI TURST, 36, 6th Main Road, Malleswaram, Bangalore - 560 003. PRINTED AT RAVI GRAPHICS, 49, 4th Cross, SSI Area, Rajajinagar, Bangalore - 560 010

Editor : M. SHIVAKUMAR